

विश्व कोंकणी
साहित्य ११

ಕೊಂಕಣಿ ರಂಗಭೂಮಿಯ ನಿರ್ಮಾತೃ

# ಬೋಳಂತೂರು ಕೃಷ್ಣ ಪ್ರಭು

ಬಿ. ಮಧುಕರ ಮಲ್ಯಾ



ಕೊಂಕಣಿ ರಂಗ ಭೂಮಿಯ ಆದ್ಯ

# ಬೋಳಂತೂರು ಕೃಷ್ಣ ಪ್ರಭು

ಬಿ. ಮಧುಕರ ಮಲ್ಯ



"Bolanthuru Krishna Prabhu" Kannada written by Sri B.Madhukar Mallya "INDEEVARA", D.No.11, 270-2, Kaikunje West B.C.Road, Bantwal-574219, D.K. District, Published by Konkani Language & Cultural Foundation, World Konkani Centre, Shaktinagar, Mangalore-575016, Ph:-0824-2231877, 2231887

First Edition : Feb -2012

Copy Right : Konkani Language & Cultural Foundation (R)

Publisher : Konkani Language & Cultural Foundation
World Konkani Centre
Shaktinagar, Mangalore-575 016
Ph:-0824-2231877, 2231887

Paper Used : 70 GSM Maplitho

Pages : xviii + 22

Price : ₹ 50/-

Cover Page : Konkani Language & Cultural Foundation

Design : Konkani Language & Cultural Foundation

I.S.B.N. : 978-81-922856-9-6.

Printer : Shrathi Printers & Publishers Pvt. Ltd.
Baikmapady, New Mangalore - 575 011

# ಲೇಖಕರ ಮಾತು



ಕಳೆದ ಐದು ವರ್ಷಗಳಿಂದ ಅನಿರೀಕ್ಷಿತವಾಗಿ ಬಂಟ್ವಾಳದ ಜೋಡುಮಾರ್ಗ ನಿವಾಸಿಯಾದೆ. ಸಹಜವಾಗಿಯೇ ಬಂಟ್ವಾಳದ ಸಂಪರ್ಕ ಬಲಗೊಂಡಿತು. ಎರಡು ವರ್ಷಗಳ ಹಿಂದೆ ಕೊಂಕಣಿ ಭಾಷೆಯ ಪ್ರಪ್ರಥಮ ಪ್ರಕಟಿತ ನಾಟಕ ಕೃತಿ "ಚಂದ್ರಹಾಸ" ಕೈ ಸೇರಿತು. ಬಂಟ್ವಾಳ ನಿವಾಸಿಯಾಗಿದ್ದ ಬೋಳಂತೂರು ಕೃಷ್ಣ ಪ್ರಭುಗಳು 1912 ರಲ್ಲಿ ರಚಿಸಿದ ಗೀತ ನಾಟಕವಿದು ಎಂದು ತಿಳಿದು ಸಂಭ್ರಮಿಸಿದೆ. 2012 ಕ್ಕೆ ಶತಕದ ಸಂಭ್ರಮಾಚರಣೆಯನ್ನು ಸಾರ್ಥಕಗೊಳಿಸಲು ಕೃತಿಕಾರನ ಜೀವನ ಚರಿತ್ರೆ ಪುಸ್ತಕವನ್ನು ಪ್ರಕಟಿಸುವ ಯೋಜನೆ ಇದೆಯೆಂದೂ ಆ ಕೆಲಸವನ್ನು ನಾನು ಮಾಡಬೇಕೆಂದೂ ಹಿರಿಯರಾದ ಕೊಂಕಣಿ ಭಾಸ ಆನಿ ಸಂಸ್ಕೃತಿ ಪ್ರತಿಷ್ಠಾನ, ವಿಶ್ವ ಕೊಂಕಣಿ ಕೇಂದ್ರದ ಸಂಸ್ಥಾಪಕ ಅಧ್ಯಕ್ಷ ವಿಶ್ವ ಕೊಂಕಣಿ ಸರದಾರ ಶ್ರೀ ಬಸ್ತಿ ವಾಮನ ಶೆಣೈಯವರು ಅಪ್ಪಣೆ ಕೊಡಿಸಿದರು. ಕೊಂಕಣಿ ಭಾಷಾಭಿವೃದ್ಧಿಗಾಗಿ ಅಹರ್ನಿಶಿ ದುಡಿಯುತ್ತಿರುವ ದಣಿವರಿಯದ ಧೀಮಂತ ಆದರಣೀಯರು ಶ್ರೀ ಬಸ್ತಿಯವರು. ಅವರ ಪ್ರೇರಣೆ ಹಾಗೂ ಮಾರ್ಗದರ್ಶನದ ಫಲವೇ ಈ ಕಿರುಕೃತಿ.

ಶ್ರೀ ಬೋಳಂತೂರು ಕೃಷ್ಣ ಪ್ರಭು ಕುರಿತು ಇದು ಮೊದಲ ಕೃತಿಯಲ್ಲ. ಕೀರ್ತಿಶೇಷ ಸಾಹಿತಿ ನೀರ್ಪಾಜೆ ಭೀಮ ಭಟ್ಟರು 1998 ರಲ್ಲಿ ಬರೆದ "ಕವಿ ಸಾಹಿತಿ ಸಾಮಾಜಿಕ ಧುರೀಣ ಬೋಳಂತೂರು ಕೃಷ್ಣ ಪ್ರಭು" ಪುಸ್ತಕದ ವಿಸ್ತೃತ ರೂಪವಿದು ಎನ್ನಬಹುದು. ಅವರನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಹಿರಿಯ ಸಮಾಜ ಸೇವಕರೂ, ಸಾಮಾಜಿಕ, ಧಾರ್ಮಿಕ, ಸಾಹಿತ್ಯಿಕ ಕ್ಷೇತ್ರಗಳಲ್ಲಿ ನಾಮಾಂಕಿತರೂ ಆಗಿರುವ ಸಾಂಸ್ಕೃತಿಕ ನೇತಾರ ಶ್ರೀ ಏರ್ಯ ಲಕ್ಷ್ಮೀನಾರಾಯಣ ಆಳ್ವರವರು ಮುನ್ನುಡಿ ಬರೆದು ಹರಸಿರುವುದು ನನಯ ಭಾಗ್ಯ. ಅವರ ಅನುಭವಪೂರ್ಣ ಅಮೃತವಚನಗಳಿಂದ ಈ ಕೃತಿಯ ಮೌಲ್ಯ ಹೆಚ್ಚಿದೆಯೆಂದು ಭಾವಿಸಿದ್ದೇನೆ. ಅವರಿಗೆ ನಾನು ಆಭಾರಿ.

ತಮ್ಮ ಮುದ್ರಣಾಲಯದ ಬಿಡುವಿಲ್ಲದ ಕಾಯಕದ ನಡುವೆಯೂ ಪ್ರಭುಗಳ ಜೀವಿತಕಾಲದ ಘಟನೆಗಳನ್ನು ಒಂದೊಂದಾಗಿ ನೆನಪಿಸಿ ಕೃತಿ ರಚನೆಗೆ ತುಂಬು ನೆರವು ನೀಡಿದವರು ದಿ. ಬೋಳಂತೂರು ಕೃಷ್ಣ ಪ್ರಭುಗಳ ಚಿರಂಜೀವಿಗಳಾದ

ಬಂಟ್ವಾಳ ದಿವಾಕರ ಪ್ರೆಸ್‌ನ  ಮಾಲಕರು ಶ್ರೀ ವಸಂತ ಮಾಧವ ಪ್ರಭು ಹಾಗೂ ಶ್ರೀ ವಿಶ್ವನಾಥ ಪ್ರಭುರವರಿಗೆ ನಾನು ಋಣಿಯಾಗಿದ್ದೇನೆ. ದಿ. ಕೃಷ್ಣ ಪ್ರಭುಗಳ ಬಾಲ್ಯ, ಜೀವನ ಹಾಗೂ ಕುಟುಂಬದ ಕುರಿತು ವಿಶೇಷ ಮಾಹಿತಿ ಒದಗಿಸಿದ ಹಿರಿಯರಾದ ಶ್ರೀ .ಬಿ. ವೆಂಕಟರಮಣ ಪ್ರಭುಗಳಿಗೆ ಕೃತಜ್ಞತೆಗಳು. ಬಂಟ್ವಾಳ ಲಕ್ಷ್ಮೀನಾರಾಯಣ ಪ್ರಭುಗಳ ಸುಪುತ್ರ ಶ್ರೀ ಪ್ರಭಾಕರ ಪ್ರಭು, ಮಿತ್ರರಾದ ಶ್ರೀ ಪಿ. ವಸಂತ ಪ್ರಭು, ಹಿರಿಯರಾದ ಡಾ । ಬಿ. ನರೇಂದ್ರ ಆಚಾರ್ಯ ಮೊದಲಾದ ಹಿತೈಷಿಗಳ ಸಹಕಾರ ಸ್ಮರಣೀಯ.

ಚಂದ್ರಹಾಸ ನಾಟಕ ಕೃತಿಗೆ 100 ಸಂವತ್ಸರ ತುಂಬುವ ಸಂಭ್ರಮ ಕಾಲದಲ್ಲಿ ಈ ಕೃತಿ ಬಿಡುಗಡೆಗೊಳ್ಳುತ್ತಿರುವುದಕ್ಕೆ ಹರ್ಷಿಸುತ್ತೇನೆ.

ಪ್ರಕಾಶಕರಾದ ಕೊಂಕಣಿ ಭಾಸ ಆನಿ ಸಂಸ್ಕೃತಿ ಪ್ರತಿಷ್ಠಾನದ ಆಡಳಿತ ಮಂಡಳಿಗೆ ನನ್ನ ವಂದನೆಗಳು.

ಜೋಡುಮಾರ್ಗ, ಬಂಟವಾಳ — ಬಿ. ಮಧುಕರ ಮಲ್ಯ

02-01-2012

# ಮುನ್ನುಡಿ



ಸಮಾಜದ ಎಲ್ಲಾ ಕ್ಷೇತ್ರಗಳಂತೆ ಸಾಹಿತ್ಯ ಕ್ಷೇತ್ರದಲ್ಲೂ ಅವರ ಸಾಧನೆಯನ್ನು ಮರೆತು ಅವಜ್ಞೆಗೆ ಒಳಗಾಗುವ ಸಾಧಕರು ಕೆಲವರಿರುತ್ತಾರೆ. ಅಂತಹ ಅನಾದರಕ್ಕೆ ಒಳಗಾದ ಒಬ್ಬ ಸಾಹಿತಿ – ಅದೂ ಕೊಂಕಣಿ ಮತ್ತು ಕನ್ನಡ ಉಭಯ ಭಾಷಾ ಸಾಹಿತಿ ಬಂಟ್ವಾಳ ನಿವಾಸಿಯಾಗಿದ್ದ ಬೋಳಂತೂರು ಕೃಷ್ಣ ಪ್ರಭುಗಳು. ಅವರ ಬರವಣಿಗೆ ಗಾತ್ರದಲ್ಲಿ ಬೃಹತ್ ಅಲ್ಲದಿದ್ದರೂ ನೂರು ವರ್ಷಗಳ ಹಿಂದೆ ನವ್ಯೋದಯದ ಮುಂಗೋಳಿ ಕೂಗುವ ಹೊತ್ತಿಗೆ ಎಚ್ಚೆತ್ತು ಕಾವ್ಯ, ಕಾದಂಬರಿ, ಕವನ, ನಾಟಕ– ಈ ಎಲ್ಲಾ ಕ್ಷೇತ್ರಗಳಲ್ಲೂ ಬರವಣಿಗೆ ನಡೆಸಿದ ಪ್ರಥಮನೊಬ್ಬನನ್ನು ಮರೆಯುವುದು ಅಪರಾಧ. ಅದೂ ಸಮಗ್ರ ಕೊಂಕಣಿ ಸಾಹಿತ್ಯ ಕ್ಷೇತ್ರದಲ್ಲೇ ಮೊತ್ತ ಮೊದಲ ಸಂಗೀತ ನಾಟಕ ಬರೆದ ಆದ್ಯನನ್ನು ಸರಿಯಾದ ರೀತಿಯಲ್ಲಿ ನೆನೆಯದಿರುವುದು ಅಕ್ಷಮ್ಯ ಅಪರಾಧ.

ಈಗ ನಿಮ್ಮ ಮುಂದಿರುವುದು, ಹೆಚ್ಚಿನ ಪಾಲು ಮರೆಯಲ್ಲಿದ್ದ ಬೋಳಂತೂರು ಕೃಷ್ಣ ಪ್ರಭುಗಳ ಬದುಕು ಬರಹಗಳ ಸಂಕ್ಷಿಪ್ತ ಆದರೆ ಸಮಗ್ರ ಚಿತ್ರಣದ ಪುಸ್ತಕ. ಅಲ್ಲಿ ಇಲ್ಲಿ ಹರಡಿ ಹೋದ ಪ್ರಭುಗಳ ಬರಹಗಳನ್ನು ಜೊತೆಗೂಡಿಸಿ ಮರವೆಯ ತೆರೆಯ ಹಿಂದೆ ಅಡಗಿ ಹೋಗಿ ಅಷ್ಟಿಷ್ಟು ನೆನಪಿರುವ ಅವರ ಬದುಕಿನ ತುಣುಕುಗಳನ್ನು ಹತ್ತಾರು ಕಡೆ ಸುತ್ತಿ ಕಲೆಹಾಕಿ, ಹತ್ತಾರು ಜನರನ್ನು ಕಂಡು ಮಾತಾಡಿಸಿ ಬಿಡಿನೆನಪುಗಳನ್ನು ಒಡಸೇರಿಸಿ ಒಪ್ಪ ಓರಣವಾಗಿ ಪೋಣಿಸಿ ಪ್ರಭುಗಳ ಒಟ್ಟಂದದ ಚಿತ್ರಣವನ್ನು ಬಿಡಿಸಿದವರು ಬಾರಕೂರಿನ ಮಧುಕರ ಮಲ್ಯ ಅವರು. ಇದಕ್ಕಾಗಿ ಕೊಂಕಣಿ ಮತ್ತು ಕನ್ನಡ ಈ ಎರಡೂ ಸಾರಸ್ವತ ಕ್ಷೇತ್ರದ ಆಸಕ್ತರ ಪರವಾಗಿ ತುಂಬು ಹೃದಯದಿಂದ ಮಲ್ಯರನ್ನು ಅಭಿನಂದಿಸುತ್ತೇನೆ.

ಬೋಳಂತೂರು ಕೃಷ್ಣಪ್ರಭುಗಳನ್ನು ನಾನು ಎಳವೆಯಿಂದಲೇ ಕಣ್ಣಿನಿಂದ ಕಂಡಿದ್ದೆ. ನಾನು ಒಂದನೇ ದರ್ಜೆಯ ಕಲಿಕೆಗಾಗಿ ಸೇರಿದ್ದು ಬಂಟ್ವಾಳದ ಆಗಿನ ಬೋರ್ಡು

ಎಲಿಮೆಂಟರಿ ಶಾಲೆಗೆ, ನಮ್ಮ ಮನೆಯಿಂದ ಬಂಟ್ವಾಳದ ಬೋರ್ಡು ಎಲಿಮೆಂಟರಿ ಶಾಲೆಗೆ ಹೋಗಬೇಕಾದರೆ ಪ್ರಭುಗಳ ವಿಕ್ಟೋರಿಯಾ ಪ್ರೆಸ್ಸನ್ನು ದಾಟಿಯೇ ಹೋಗಬೇಕಾಗಿತ್ತು. ಹೀಗಾಗಿ ಶಾಲಾ ದಿನಗಳಲ್ಲಿ ಬೆಳಿಗ್ಗೆ ಮತ್ತು ಸಂಜೆ ಶಾಲೆಗೆ ಹೋಗುವಾಗ ಮತ್ತು ಶಾಲೆ ಬಿಟ್ಟು ಹಿಂದಿರುಗುವಾಗ ದಿನಕ್ಕೆ ಎರಡು ಸಲ ವಿಕ್ಟೋರಿಯಾ ಪ್ರೆಸ್ಸನ್ನು ದಾಟುತ್ತಾ ಒಳಗಿದ್ದ ಕೃಷ್ಣ ಪ್ರಭುಗಳನ್ನು ಕಾಣುತ್ತಿದ್ದೆ. ಆಗೊಮ್ಮೆ ಈಗೊಮ್ಮೆ ಹೊರ ಜಗುಲಿಯಲ್ಲಿ, ಕೆಲವೊಮ್ಮೆ ಮಾರ್ಗದಲ್ಲಿ ಪ್ರಭುಗಳ ದರ್ಶನವಾಗುತ್ತಿತ್ತು. ಹದನಾದ ಎತ್ತರ, ಗೌರವರ್ಣ, ದುಂಡನೆಯ ಮುಖ, ಕಿರು ಮೀಸೆ, ಸೊಗಸಾದ-ಕಚ್ಚೆ, ಹಾಕಿಕೊಂಡ ಅಂಗಿಯ ಮೇಲೊಂದು ಕೋಟು ತೊಟ್ಟ ಪ್ರಭುಗಳದ್ದು ಕಾಂತಿಯುತ, ಸುಲಕ್ಷಣದ ವ್ಯಕ್ತಿತ್ವ, ಆ ಚಿತ್ರ ನನ್ನ ನೆನಪಿನ ಕೇನ್ವಾಸಿನಲ್ಲಿ ಇಂದೂ ಅಚ್ಚೊತ್ತಿದಂತಿದೆ. ನಾನು ಬೆಳೆದಂತೆ ಅದು ಇದು ಮುದ್ರಣಕ್ಕೆ ವಿಕ್ಟೋರಿಯಾ ಪ್ರೆಸ್ಸಿನೊಳಗೇ ಹೋಗಿ ನೋಡಿ ಮಾತಾಡಿ ವ್ಯವಹಾರ ನಡೆಸುತ್ತಿದ್ದೆ ಆಗ ನಾನು ಕಂಡದ್ದು ಅವರ ವ್ಯಾವಹಾರಿಕ ಮುಖ.

ಮುಂದೆ ನಾನು ಬೆಳೆದಂತೆ ನನ್ನಲ್ಲಿ ಓದಿನ ಹುಚ್ಚು ಹೆಚ್ಚುತ್ತಾ ಹೋಯಿತು. ಜೊತೆಗೆ ನನ್ನ ಬಂಟ್ವಾಳದ ಒಳವುಗಳನ್ನು ತಿಳಿಯುವ ಬಯಕೆ ಹುಟ್ಟಿತು. ಇಂತಹ ಸಂದರ್ಭದಲ್ಲೇ ಕೃಷ್ಣ ಪ್ರಭುಗಳ ಕೆಲವು ಪುಸ್ತಕಗಳು ನನ್ನ ಕೈಗೆ ಬಂತು. ಕಣ್ಣ ಮುಂದೆ ಹಾದು ಹೋದವು. ಪರಿಣಾಮವಾಗಿ ಬಂಟ್ವಾಳದವರೊಬ್ಬರು ಕನ್ನಡದಲ್ಲಿ ಇಷ್ಟು ನಿರ್ಮಲ ಬರಹವನ್ನು ಬರೆಯುತ್ತಿದ್ದರು ಎಂದರೆ ಅವರ ಎಲ್ಲಾ ಬರಹಗಳನ್ನು ಓದುವ ಬಯಕೆ ಬೆಳೆಯಿತು. ಆಕಾರಣಕ್ಕಾಗಿ ನಾನು ಅವರ ಸಮಗ್ರ ಹೊತ್ತಿಗೆಗಳನ್ನು ಪಡೆಯುವ ಆತುರದಿಂದ ವಿಕ್ಟೋರಿಯ ಪ್ರೆಸ್ಸಿಗೆ ಮುಂದೊಮ್ಮೆ ಹೋದಾಗ ಕೃಷ್ಣ ಪ್ರಭುಗಳು ಅಲ್ಲಿರಲಿಲ್ಲ. ಅಲ್ಲಿದ್ದುದು ಕೃಷ್ಣ ಪ್ರಭುಗಳ ಮೊದಲ ಹೆಂಡತಿಯ ಮಗ ಲಕ್ಷ್ಮೀನಾರಾಯಣ ಪ್ರಭುಗಳು. ಆಗ ಕೃಷ್ಣ ಪ್ರಭುಗಳು ಬಂಟ್ವಾಳದಲ್ಲೇ ತನ್ನ ಎರಡನೆಯ ಹೆಂಡತಿಯ ಮಕ್ಕಳೊಂದಿಗೆ ಇದ್ದರು. ಲಕ್ಷ್ಮೀನಾರಾಯಣ ಪ್ರಭುಗಳು ಪ್ರೆಸ್ಸಿನಲ್ಲಿ ಇದ್ದ ಅವರ ತಂದೆಯವರ ಪುಸ್ತಕಗಳಲ್ಲಿ ಸಿಕ್ಕಿದ ಕೆಲವನ್ನು ಹುಡುಕಿ ಕೊಟ್ಟರು. ಆಗಲೇ ನನಗೆ ಕೃಷ್ಣ ಪ್ರಭುಗಳ ಕೆಲವು ಪ್ರಕಟಿತ ಕೊಂಕಣಿ ನಾಟಕಗಳ ಪುಸ್ತಕಗಳೂ

ದೊರೆತವು. ಅವುಗಳಲ್ಲಿ ಒಂದು ಚಂದ್ರಹಾಸ ಸಂಗೀತ ನಾಟಕ ಪುಸ್ತಕ. ಮುಂದೆ ತಿಳಿಯಿತು ಅದು ಸಮಗ್ರ ಕೊಂಕಣಿ ಸಾಹಿತ್ಯ ಕ್ಷೇತ್ರದಲ್ಲಿ ಮೊತ್ತ ಮೊದಲ ನಾಟಕ ಎಂದು. ಮುಂದಿನ ದಿನಗಳಲ್ಲಿ ಲಕ್ಷ್ಮೀನಾರಾಯಣ ಪ್ರಭುಗಳು ತಂದೆಯ ಹೆಸರಲ್ಲಿ ಒಂದು ಟ್ರಸ್ಟ್ ಮಾಡಿ ಆ ಟ್ರಸ್ಟಿನ ಮೂಲಕ ಕೃಷ್ಣ ಪ್ರಭುಗಳ ಹೆಚ್ಚಿನ ಪುಸ್ತಕಗಳನ್ನು ಮರು ಮುದ್ರಣಗೊಳಿಸಿದರು.

ಆ ಕಿರು ಹೊತ್ತಗೆಗಳನ್ನು ಓದಿದಾಗ ನನಗೆ ಅನಿಸಿತು "ಓ ಕನ್ನಡ ನವೋದಯದ ಮೊದಲ ದಿನಗಳಲ್ಲೇ ಕನ್ನಡ ಸಾರಸ್ವತ ಲೋಕದಲ್ಲಿ ತನ್ನ ಇತಿಮಿತಿಯಲ್ಲಿ ಕೃಷಿ ಕಾರ್ಯ ನಡೆಸಿದ ಸಾಧಕನೊಬ್ಬ ಇಲ್ಲಿದ್ದಾನೆ! ಅದೂ ಅವರು ನನ್ನ ಊರು ಬಂಟ್ವಾಳದಲ್ಲೇ ಇದ್ದಾರೆ ಎನ್ನುವ ಸಂತೋಷ ನನ್ನನ್ನು ತುಂಬಿಕೊಂಡಿತು. ಮುಂದೆ ತಿಳಿಯಿತು ಕೃಷ್ಣ ಪ್ರಭುಗಳು ಮಾಡಿದ ಸಾಹಿತ್ಯ ಕೃಷಿ ಕನ್ನಡಕ್ಕಿಂತ ಕೊಂಕಣಿಯಲ್ಲಿ ಹೆಚ್ಚಿನದು ಎಂದು. ಜೊತೆಗೆ ಪ್ರಭುಗಳ ಚಂದ್ರಹಾಸ ನಾಟಕ ಕೊಚ್ಚಿಯಿಂದ ಗೋವಾ, ಬೊಂಬಾಯಿಯವರೆಗೆ ಹಬ್ಬಿ ಹರಡಿದ್ದ ಕೊಂಕಣಿ ಸಾಹಿತಿಗಳು ಮಾಡಿದ ಕೃಷಿ ಕ್ಷೇತ್ರದಲ್ಲಿ ಮೊತ್ತ ಮೊದಲು ಕೊಯ್ಲು ಆದ ತೆನೆ ! ಈ ನಾಟಕ 1912 ಫೆಬ್ರವರಿ 10 ರಂದು ಬಂಟ್ವಾಳ ಶ್ರೀ ವೆಂಕಟರಮಣ ಸ್ವಾಮಿ ದೇಗುಲದ ಎಲಿಮೆಂಟರಿ ಶಾಲೆಯಲ್ಲಿ ರಂಗ ಪ್ರದರ್ಶನಗೊಂಡಿತು ! ಇಂದಿಗೆ 100 ವರುಷಗಳ ಹಿಂದೆ, ಅದೇ ನೂರನೇ ವರ್ಷದ ಹಬ್ಬದ ಸಿಹಿಯೂಟವಾಗಿ ಬಿ. ಮಧುಕರ ಮಲ್ಯರವರು ಬರೆದ ಕೃಷ್ಣ ಪ್ರಭುಗಳ ಕುರಿತಾದ ಈ ಪುಸ್ತಕ ಅನಾವರಣ ನಡೆಯಲಿದೆ ! ಇದು ಸಾಹಿತ್ಯ ಪ್ರಿಯರಿಗೆ ಆನಂದದ ಸಂಗತಿ, ಮಲ್ಯರಿಗೆ ಭಾಗ್ಯದ ವಿಚಾರ !

ಹಲವು ವರ್ಷಗಳ ಹಿಂದೆಯೇ ಕೃಷ್ಣ ಪ್ರಭುಗಳು ಮತ್ತು ಅವರ ಸಾಹಿತ್ಯದ ಅವಗಣನೆಗೆ ಒಳಗಾದ ವಿಚಾರ ನಾನೂ ನನ್ನ ಆತ್ಮೀಯ ಬಂಧು ವಿಶ್ವ ಕೊಂಕಣಿ ಸರದಾರ ಬಸ್ತಿ ವಾಮನ ಶೆಣೈಯವರು ಮಾತಾಡಿಕೊಂಡಿದ್ದೆವು. ಇದಕ್ಕಾಗಿ ಬಸ್ತಿ ವಾಮನ ಶೆಣೈಯವರು ಗೋವಾ, ಬೊಂಬಾಯಿ, ಕೇರಳ, ದಿಲ್ಲಿ ಮೊದಲಾದ ಪ್ರದೇಶಗಳಿಂದ ಕೊಂಕಣಿ ಸಾಹಿತ್ಯ ಕ್ಷೇತ್ರದ ದಿಗ್ಗಜರನ್ನು ಬರಮಾಡಿಸಿ ಬಂಟ್ವಾಳದಲ್ಲೇ 2009 ಅಕ್ಟೋಬರ 14 ರಂದು ಕೃಷ್ಣ ಪ್ರಭುಗಳ ಕುರಿತಾಗಿ ದೊಡ್ಡ ಪ್ರಮಾಣದ

ಒಂದು ಸಮಾರಂಭವನ್ನು ಏರ್ಪಡಿಸಿದ್ದರು. ನಾನೂ ಆ ಸಮಾರಂಭದಲ್ಲಿ ಭಾಗಿಯಾಗಿದ್ದೆ ಅಖಿಲ ಭಾರತ ಖ್ಯಾತಿಯ ವಿದ್ವಾಂಸರು ಬಂದು ಕೊಂಕಣಿ ಸಾಹಿತ್ಯದ ಆದ್ಯರಲ್ಲಿ ಒಬ್ಬರಾದ ಬಂಟ್ವಾಳದ ಬೋಳಂತೂರು ಕೃಷ್ಣ ಪ್ರಭುಗಳ ಕೊಂಕಣಿಯ ಪ್ರಪ್ರಥಮ ಸಾಹಿತ್ಯ ಕೃತಿಕರ್ತನ ಕುರಿತಾಗಿ ಬಂಟ್ವಾಳದಲ್ಲಿ ಜರಗಿದ ಈ ಸಮಾರಂಭಕ್ಕೆ ಬಂಟ್ವಾಳದಿಂದ ಹತ್ತು ಜನರೂ ಬಂದಿರಲಿಲ್ಲ ಎನ್ನುವುದು ಇಂದು ನಮ್ಮ ಸಾಂಸ್ಕೃತಿಕ ಬಡತನಕ್ಕೆ ಇದು ಸಾಕ್ಷಿ ! ದುಡ್ಡೇ ದೊಡ್ಡಪ್ಪ, ಅಧಿಕಾರದ ಕುರ್ಚಿಯೇ ಸರ್ವಸ್ವ ಎನ್ನುವ ಇಂದಿನ ವ್ಯಾಪಾರಿ ಯುಗ ನಮ್ಮ ಬದುಕನ್ನು ಬರಡಾಗಿಸುತ್ತಿದೆ. ಸಾಹಿತ್ಯ, ಸಂಸ್ಕೃತಿ, ಕಲಾ ಪ್ರಕಾರಗಳೇ ಮನುಷ್ಯತ್ವವನ್ನು ಎತ್ತರಿಸುವ ವಿಷಯ ವಿಶೇಷಗಳು ನಿಜವಾದ ಸಾತ್ವಿಕ ಸಂತೋಷ ಇದರ ಮೂಲಕ ಮಾತ್ರ ಸಾಧ್ಯ.

ಕೃಷ್ಣ ಪ್ರಭುಗಳು ಐದಾರು ಭಾಷೆಗಳಲ್ಲಿ ಪರಿಣಿತರು ಎರಡು ಭಾಷೆಗಳಲ್ಲಿ ಸಾಹಿತ್ಯ ರಚನೆ ಮಾಡಿದವರು. ಕೊಂಕಣಿಯಲ್ಲಿ ಆರೇಳು ನಾಟಕಗಳು, ಕವನಗಳನ್ನು ಬರೆದಿದ್ದಾರೆ. ಕನ್ನಡದಲ್ಲಿ ಎರಡು ನಾಟಕ, ಎರಡು ಕಾದಂಬರಿ, ಕಾವ್ಯರೂಪದಲ್ಲಿ ಒಂದು ಶತಕಗುಚ್ಛ, ಹಲವು ಕವನಗಳು – ಇವಿಷ್ಟು ಇಂದು ಲಭ್ಯವಾಗಿದೆ. ಅಲ್ಲಿ ಇಲ್ಲಿ ಕಳೆದು ಹೋದುದು ಎರಡೂ ಭಾಷೆಗಳಲ್ಲಿ ಇನ್ನೂ ಇದ್ದಿರಬಹುದೆಂದೂ ನನ್ನ ನಂಬಿಕೆ.

ನನಗೆ ಒಬ್ಬ ಲೇಖಕನ ಪುಸ್ತಕಗಳ ಸಂಖ್ಯೆ ಮುಖ್ಯ ಅನಿಸುವುದಿಲ್ಲ, ಬರೆದ ಸಾಹಿತ್ಯದ ಗುಣ ಮುಖ್ಯವಾಗುತ್ತದೆ. ಗಾತ್ರವಲ್ಲ. ಪ್ರಭುಗಳ ಕೊಂಕಣಿ ಕನ್ನಡ ಎರಡೂ ಭಾಷೆಗಳ ಲಭ್ಯ ಸಾಹಿತ್ಯ ಸರಳವಾಗಿ, ಸುಗಮವಾಗಿದೆ. ನಮ್ಮನ್ನು ಆಸಕ್ತಿಯಿಂದ ಓದಿಸಿಕೊಂಡು ಹೋಗುತ್ತದೆ. ಅವರು ಧಾರ್ಮಿಕ ಮನೋವೃತ್ತಿಯ ವ್ಯಕ್ತಿ, ಹಾಗಾಗಿಯೇ ಅವರ ಎಲ್ಲಾ ನಾಟಕಗಳು ಪೌರಾಣಿಕ ಕಥಾ ವಿಚಾರಗಳ ಕುರಿತಾಗಿಯೇ ಇವೆ. ಜೊತೆಗೆ ಅವು ನೈತಿಕತೆಯನ್ನು ಎತ್ತಿ ಹಿಡಿಯುವ ಕೆಲಸವನ್ನು ಕಾಂತಾ ಸಮ್ಮಿತಿಯಿಂದ ಸಾಧಿಸುತ್ತವೆ. ಅವರ ಸಾಹಿತ್ಯ ಪಾಂಡಿತ್ಯ ಕೃತಿಗಳಲ್ಲ. ಆದರೆ ಸಾಹಿತ್ಯಾಸಕ್ತ ಸಜ್ಜನರು ಓದಲೇ ಬೇಕಾದ, ಮಾತ್ರವಲ್ಲ ಮನೆಯ ಎಳೆಯರನ್ನು ಓದಿಸಲೇಬೇಕಾದ ನಿರ್ಮಲ ಸಾಹಿತ್ಯವಾಗಿದೆ. ಹಾಗೆಂದು ಅವು ಉಪದೇಶ ಸಾಹಿತ್ಯವಾಗಿಲ್ಲ. ಧರ್ಮ, ನೀತಿಗಳನ್ನು

ಕಲಾತ್ಮಕವಾಗಿ, ಸರಳವಾಗಿ, ಸಾಹಿತ್ಯಿಕವಾಗಿ ಹೇಳುವ ಕಲೆ ಅವರಿಗೆ ಸಾಧಿಸಿದೆ. ಕನ್ನಡ ಸಾಹಿತ್ಯದ ನವ್ಯೋದಯದ ಕಾಲಘಟ್ಟದ ಎಲ್ಲಾ ಸಾಹಿತಿಗಳಲ್ಲಿ ಸಾಮಾನ್ಯವಾಗಿ ಕಂಡು ಬರುವ ಒಂದು ವಿಚಾರ ಪ್ರಭುಗಳ ಎಲ್ಲಾ ಪ್ರಕಾರದ ಬರವಣಿಗೆಗಳಲ್ಲೂ ಎದ್ದು ಕಾಣುತ್ತದೆ. ಅದೆಂದರೆ "ಸಾಹಿತ್ಯದ ಉದ್ದೇಶ ಬರೇ ಸಂತೋಷ ಕೊಡುವುದು ಮಾತ್ರವಲ್ಲ ಅದು"ಪಾಪಮಿದು, ಪುಣ್ಯಮಿದು, ಹಿಂತರೂಪಮಿದು, ಅಹಿಂತಪ್ರಕಾರಮಿದು" ಎಂದು ತಿಳಿಹೇಳುವ ಮೂಲಕ ಓದುಗರಲ್ಲಿ ನೈತಿಕತೆಯನ್ನು ಬಿತ್ತಿ ಬೆಳೆಸುವುದೂ ಸಾಹಿತ್ಯದ ಕೆಲಸವಾಗಬೇಕು." ಬೋಳಂತೂರು ಕೃಷ್ಣ ಪ್ರಭುಗಳ ಎಲ್ಲಾ ಬರಹಗಳೂ ಓದುಗರ ಮನಸ್ಸನ್ನು ಸಂತೋಷಗೊಳಿಸುತ್ತಾ ಅಂತರಂಗದಲ್ಲಿ ನೈತಿಕತೆಯನ್ನು ಬಿತ್ತುತ್ತಾ ನಡೆಯುವುದರಲ್ಲಿ ಯಶಸ್ವಿಯಾಗಿದೆ ಎಂದು ಧೈರ್ಯದಿಂದ ಹೇಳಬಹುದು.

ಬಂಟ್ವಾಳದ ಕೃಷ್ಣ ಪ್ರಭುಗಳ ಕುರಿತಾಗಿ ಬಂಟ್ವಾಳದವನೇ ಆದ ನನಗೂ ತಿಳಿಯದ ಒಂದು ರೋಚಕ ವಿಷಯವನ್ನು ಅನ್ವೇಷಣೆ ಮಾಡಿ ಬಾರಕೂರಿನ ಮಧುಕರ ಮಲ್ಯರು ಈ ಹೊತ್ತಗೆಯಲ್ಲಿ ತಿಳಿಸಿದ್ದಾರೆ. ಅದು ರಾಷ್ಟ್ರ ಪ್ರೇಮಿ ಗಾಂಧೀ ಭಕ್ತರಾದ ಪ್ರಭುಗಳು ತನ್ನ ಪ್ರೆಸ್ಸಿಗೆ ವಿಕ್ಟೋರಿಯಾ ಪ್ರೆಸ್ ಎಂದು ನಾಮಕರಣ ಮಾಡಿದ ವಿಚಾರ.

ಪ್ರಭುಗಳು ಧಾರ್ಮಿಕ ಮನೋವೃತ್ತಿಯವರು. ಜೊತೆಗೆ ಸ್ವಾತಂತ್ರ್ಯ ಚಳವಳಿಯ ಸಮರ್ಥಕರು. ಅಪ್ಪಟ ದೇಶ ಪ್ರೇಮಿ, ಅಷ್ಟೇ ಅಲ್ಲ ಹರಿಜನ ಉದ್ಧಾರವು ಮುಖ್ಯ ಕಾರ್ಯವಾಗಿದ್ದ ಗಾಂಧೀಜಿಯವರ ಕುರಿತು ಅಪಾರ ಆದರ ಇದ್ದವರು. ಇದನ್ನು ಗಾಂಧೀಜಿಯವರ 1930ರ ಉಪ್ಪಿನ ಚಳವಳಿಯ ಹೊತ್ತಿಗೆ ಪ್ರಭುಗಳು ಬರೆದ ಒಂದು ಕವನದಲ್ಲಿ ಕಾಣಬಹುದು.

ಉಪ್ಪು ಬೇಕೆ ಉಪ್ಪು ಪರಿಶುದ್ಧ ಉಪ್ಪು॥
ತಪ್ಪು ತೆರಿಗೆಗಳ ಒಪ್ಪದಿಹ ಉಪ್ಪು.
ಸುಲಿಗೆ ನಿಲಿಸುವ ಉಪ್ಪು। ಸುಂಕವಿಲ್ಲದ ಉಪ್ಪು॥
ಜಲನಿಧಿಯು ಕರೆದಿತ್ತ ತಿಳಿ ನೀರಿನುಪ್ಪು।
ಬಿಳಿ ಮುಖಕೆ ಮಸಿ ಕಪ್ಪು ಬಳಸಿ ಭಂಗಿಸಿದುಪ್ಪು॥
ಛಲದಂಕ ಗಾಂಧಿ ಮಹಾತ್ಮರ ಉಪ್ಪು

ಆ ಕಾಲದಲ್ಲಿ ಪ್ರಕಟಗೊಂಡ ಪ್ರಭುಗಳ ಈ ಕವನ ಅವರ ದೇಶಪ್ರೇಮಕ್ಕೆ, ಗಾಂಧೀ ಭಕ್ತಿಗೆ ಸಾಕ್ಷಿಯಾಗುವುದಷ್ಟೇ ಅಲ್ಲ, ಅವರು ಬ್ರಿಟಿಷರನ್ನು ಬಹಿರಂಗವಾಗಿಯೇ ಎದುರಿಸುವ ಎದೆಗಾರಿಕೆ ಹೊಂದಿದ್ದರು ಎನ್ನುವುದನ್ನು ಎತ್ತಿ ಹೇಳುತ್ತದೆ.

ಇಂತಹ ದೇಶ ಪ್ರೇಮಿಯೊಬ್ಬರು ತನ್ನ ಮುದ್ರಣಾಲಯಕ್ಕೆ ವಿಕ್ಟೋರಿಯಾ ಪ್ರೆಸ್ ಎಂದು ಏಕೆ ನಾಮಕರಣ ಮಾಡಿದರು? ಇದು ನನ್ನನ್ನು ಕಾಡಿದ್ದ ಪ್ರಶ್ನೆ, ಈ ವಿಚಾರದ ಹಿಂದಿರುವ ಸತ್ಯವನ್ನು ಅರಸಿ ಈ ಪುಸ್ತಕದಲ್ಲಿ ಹೇಳುವ ಮೂಲಕ ಮಲ್ಯರು ತುಂಬಾ ಒಳ್ಳೆಯ ಕೆಲಸವನ್ನು ಮಾಡಿದ್ದಾರೆ. ಇದಕ್ಕಾಗಿ ನಾನು ಮಲ್ಯರನ್ನು ಅಭಿನಂದಿಸುತ್ತೇನೆ.

ಮಲ್ಯರ ಬರವಣಿಗೆ ಸರಳವಾಗಿದೆ, ಸುಗಮವಾಗಿದೆ, ಆಕರ್ಷಕವಾಗಿದೆ. ಕಿರಿದರೊಳ್ ಪಿರಿದುಂ ಪೇಳುವ ಕಲೆ ಅವರಿಗೆ ಕರಗತವಾಗಿದೆ. ಎಂದೋ ಆಗಬೇಕಾಗಿದ್ದ ಕನ್ನಡ ನವೋದಯದ ಸಾಹಿತಿಯೊಬ್ಬನ ಬದುಕು ಬರಹಗಳ ಒಟ್ಟು ಚಿತ್ರಣವನ್ನು ವ್ಯವಸ್ಥಿತವಾಗಿ, ಚೆಲುವಾಗಿ, ಆನೆಯನ್ನು ಕನ್ನಡಿಯಲ್ಲಿ ತೋರಿಸುವಂತೆ ಅಡಕವಾಗಿ ಚಿತ್ರಿಸಿದ ಮಧುಕರ ಮಲ್ಯರು ಈ ಸಾಹಸದಲ್ಲಿ ಕೃತಕೃತ್ಯರಾಗಿದ್ದಾರೆ. ಕೊಂಕಣಿ ಕನ್ನಡ ಎರಡು ಭಾಷಾ ಸಾಹಿತ್ಯಾಸಕ್ತರನ್ನು ಋಣಿಗಳನ್ನಾಗಿಸಿ ಧನ್ಯತೆ ಪಡೆದಿದ್ದಾರೆ.

**ಸಾಕೇತ**

**ಮೊಡಂಕಾಪು, ಬಂಟವಾಳ** **ಏರ್ಯ ಲಕ್ಷ್ಮೀನಾರಾಯಣ ಆಳ್ವ.**

01-01-2012.

# ಪ್ರಕಾಶಕರ ಮಾತು

## ಕೊಂಕಣಿ ರಂಗ ಭೂಮಿಯ ಆದ್ಯ
## ಬೋಳಂತೂರು ಕೃಷ್ಣ ಪ್ರಭು

ಚಂದ್ರಹಾಸ ನಾಟಕದ ಶತಮಾನೋತ್ಸವವನ್ನು ಆಚರಿಸುವ ಈ ಸಂಭ್ರಮದ ಗಳಿಗೆಯಲ್ಲಿ ಅದರ ಕರ್ತೃಗಳಾದ ಕೊಂಕಣಿ ಸಂಗೀತ ನಾಟಕಗಳ ಆದ್ಯರೆನಿಸುವ ದಿ. ಬೋಳಂತೂರು ಕೃಷ್ಣ ಪ್ರಭುಗಳವರನ್ನು ಸ್ಮರಿಸುವ ಈ ದಿನಗಳಲ್ಲಿ ಕನ್ನಡ, ಕೊಂಕಣಿ, ತುಳು ಭಾಷಾ ಸಾಹಿತ್ಯ ಸಾಂಸ್ಕೃತಿಕ ಕಲೆಗಳ ನೆಲೆವೀಡಾಗಿದ್ದ ಅಂದಿನ ಬಂಟವಾಳದ ಕುರಿತಾಗಿ ಮೆಲುಕಾಡುವುದೂ ಅಗತ್ಯವಿದೆ. ಇದರಿಂದಾಗಿ ನಾಟಕ, ಸಂಗೀತ ಮತ್ತು ಇತರ ಸಾಹಿತ್ಯಗಳನ್ನು ರಚಿಸಲು ದಿ. ಕೃಷ್ಣ ಪ್ರಭುಗಳಿಗೆ ಸಿಕ್ಕಿದ ಸ್ಫೂರ್ತಿ ಯಾವುದು ಎಂದು ತಿಳಿಯಲು ಸುಲಭವಾಗುತ್ತದೆ. ಮರ, ಗಿಡ, ಪ್ರಾಣಿ ಪಕ್ಷಿ ಸಂಕುಲಗಳಿಗೆ ಹೇಗೆ ಅನುಕೂಲಕರ ಪರಿಸರದ ಅಗತ್ಯವಿದೆಯೋ ಹಾಗೆಯೇ ಮನುಷ್ಯ ಪ್ರಾಣಿಗೂ ಪರಿಸರದಿಂದ ಸಿಗುವ ಸ್ಫೂರ್ತಿ, ಚೇತನಗಳಿಂದ ಕಲೆ ಸಾಹಿತ್ಯ ಸಂಸ್ಕೃತಿಗಳಲ್ಲಿ ತೊಡಗಿಸಿಕೊಳ್ಳಲು ಪ್ರಕಾಶಮಾನಕ್ಕೆ ಬರಲು ಅತ್ಯವಶ್ಯ.

ಅಂತಹ ಒಂದು ಪರಿಸರ ಬಂಟವಾಳದಲ್ಲಿ ಧಾರಾಳ ಮತ್ತು ವಿಸ್ತೃತವಾಗಿ ಇತ್ತು. ಮತ್ತು ಆ ಕಾಲದಲ್ಲೇ ಶ್ರೀ ಕೃಷ್ಣ ಪ್ರಭುಗಳಿಗೆ ತನ್ನೊಳಗೆ ರಕ್ತಗತವಾಗಿದ್ದ ಸಾಹಿತ್ಯ ಮತ್ತು ರಂಗಭೂಮಿಗಳ ಕಸುವನ್ನು ಹೊರಹೊಮ್ಮಿಸುವುದಕ್ಕೆ ಸಾಧ್ಯವಾಯಿತೆಂದು ದೃಢವಾಗಿ ಹೇಳಬಹುದಾಗಿದೆ. ಬಂಟವಾಳದ ಜೀವನದಿ ನೇತ್ರಾವತಿ, ದಡದ ಮೇಲಿರುವ ಶ್ರೀ ವೆಂಕಟರಮಣ ಸ್ವಾಮಿ ದೇವಳ, ಶ್ರೀ ಕಾಶೀಮಠದ ಗುರುಗಳಿಗೆ ಕುಳಾರವೆನಿಸಲ್ಪಡುವ ಶ್ರೀ ಕಾಶೀಮಠ, ಧರ್ಮಸ್ಥಳ ಹೆಗ್ಗಡೆಗಳ ಭಂಡಸಾಲೆ, 1892 ರಲ್ಲಿ ಸ್ಥಾಪಿತವಾದ ಎಸ್. ವಿ. ಎಸ್. ಎಲಿಮೆಂಟರಿ ಶಾಲೆ ಹಾಗೂ ಹೈಸ್ಕೂಲಗಳು, ಬಂಟವಾಳಕ್ಕೆ ಚಿನ್ನದ ಪೇಟೆ ಎಂದು ಬಿರುದು ತರಿಸಿದ ವ್ಯಾಪಾರಿಗಳು, ಸಾಹಿತ್ಯ ಕಲೆಗಳ ವಿವಿಧ ಪ್ರಕಾರಗಳಿಗೆ ರಾಜಾಶ್ರಯವನ್ನು ಕೊಟ್ಟ ಪುರಜನರು, ·ಇವೆಲ್ಲಾ ತುಳುನಾಡಿನಲ್ಲಿ ಬಂಟವಾಳದ ಬಗ್ಗೆ ಬರುವ ಭರಮಿನ ವಿಚಾರಗಳು. ಬಂಟವಾಳ ಧೀರ ವೀರರ ನಾಡಾಗಿದ್ದಂತೆ, ಕಲಾರಾಧಕರ, ಸಾಹಿತ್ಯ ನಿರ್ಮಾಪಕರ ಆಡುಂಬೊಲವೂ ಆಗಿತ್ತು. ತುಳು ಪಾಡ್ದನಗಳಲ್ಲಿ, ಕೊಂಕಣಿ ಓವಿ, ಗುಮ್ಟಾ ಪದಗಳಲ್ಲಿ ಈ ಕುರಿತಾಗಿ ಧಾರಾಳವಾದ ಪದಪುಂಜಗಳಿವೆ.

ಶತಮಾನಗಳಿಂದ ಬಂಟವಾಳ ಶ್ರೀ ದೇವಳದ ಅಂಬಲಗಳಲ್ಲಿ ಶ್ರಾವಣಮಾಸದ ಒಂದು ತಿಂಗಳಲ್ಲಿ ತಾಳಮದ್ದಳೆ ಕಾರ್ಯಕ್ರಮ ನಡೆದು ಬರುತ್ತಿತ್ತು. 1921 ರ ಇಸವಿಯಷ್ಟು ಹಿಂದೆಯೇ ಪ್ರಥಮ ತುಳು ತಾಳಮದ್ದಳೆ ಬಂಟವಾಳದಲ್ಲಿಯೇ ನಡೆಯಿತು. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ "ಸಣ್ಣ ಕತೆಗಳ ಪಿತಾಮಹ" ಪಂಜೆ ಮಂಗೇಶರಾಯರು ಬಂಟವಾಳದಲ್ಲಿ ಹುಟ್ಟಿ ಬೆಳೆದವರು. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಹೆಸರುಗಳಿಸಿದ ಶ್ರೀ ಎಂ.ಎನ್. ಕಾಮತ್‌ರ ಸಾಹಿತ್ಯ ಕೃಷಿ ಬಂಟವಾಳದಲ್ಲಿ ಶಾಲಾ ಮಾಸ್ತರರಾಗಿದ್ದ ವೇಳೆಯಲ್ಲಿಯೇ ಶುರುವಾಯಿತು. ಆ ಒಂದು ಸಾಹಿತ್ಯ ಪ್ರವಾಹ ಶ್ರೀ ಏರ್ಯ ಲಕ್ಷ್ಮೀ ನಾರಾಯಣ ಆಳ್ವರ ವರೆಗೆ ಹರಿದು ಬಂತೆಂದರೆ ತಪ್ಪಾಗದು.

ಅಂತಹ ಒಂದು ಸಾಹಿತ್ಯ ಸಂಸ್ಕೃತಿ ಕಲೆಗಳ ಸಂಗಮದಲ್ಲಿ ಹುಟ್ಟಿ ತನಗೆ ಜನ್ಮದಾತವಾಗಿ ಬಂದ ಸಾಹಿತ್ಯ ನಾಟಕ ಸಂಗೀತ ರಚನೆಯನ್ನು ಮೈಗೂಡಿಸಿಕೊಂಡು ಬಂದವರು ಬೋಳಂತೂರು ಕೃಷ್ಣ ಪ್ರಭುರವರು. ಸಾಹಿತ್ಯ ರಚನೆ ಮತ್ತು ಕೊಂಕಣಿ, ಕನ್ನಡ ನಾಟಕಗಳಲ್ಲದೇ, ಮಕ್ಕಳಿಗಾಗಿ ಸಾಹಿತ್ಯವನ್ನು ಅವರು ರಚಿಸಿದವರು. ಅವರು ಬರೆದ ಸಣ್ಣವರ ಸುಬೋಧ ಶತಕ ಆಗಿನ ಕಾಲದಲ್ಲಿ ಅಂದರೆ ಮದ್ರಾಸ ರಾಜ್ಯದಲ್ಲಿ ಬ್ರಿಟಿಷರ ಆಳ್ವಿಕೆ ಕಾಲದಲ್ಲಿ ವಿದ್ಯಾ ಇಲಾಖೆಯ ಟೆಕ್ಸ್ಟ್ ಬುಕ್ ಕಮಿಟಿಯಿಂದ ಶಾಲೆಗಳಲ್ಲಿ ಪಠ್ಯ ಪುಸ್ತಕವಾಗಿ ಆಯ್ಕೆಯಾಗಿತ್ತು ಎಂದರೆ, ಅಂದಿನ ಕಾಲದಲ್ಲಿ ವಿದ್ವತ್ ಉಳ್ಳ ಪ್ರಾಜ್ಞರು ಸುಬೋಧ ಶತಕದಲ್ಲಿ ಕಂಡ ನೀತಿ ಬೋಧಕ ತಾತ್ವಿಕ ವಿಚಾರಗಳನ್ನು ಎಷ್ಟು ಘನವಾಗಿ ಪರಿಗಣನೆ ಮಾಡಿದ್ದರು ಎಂದು ತಿಳಿದುಕೊಳ್ಳಬಹುದು. ಇಂತಹ ಶ್ರೇಷ್ಠ ಸಾಹಿತಿ, ನಾಟಕ, ಸಂಗೀತಗಳ ರಚನಕಾರ ಹುಟ್ಟಿದ ನಾಡಿನಲ್ಲಿಯೇ ನಾನು ಹುಟ್ಟಿ ಬೆಳೆದೆ ಎಂಬುದು ನನ್ನ ಮಟ್ಟಿಗೆ ವಿಶೇಷವಾದ ಪುಣ್ಯ ಎಂದೇ ನಾನು ನಂಬಿದ್ದೇನೆ.

ಚಂದ್ರಹಾಸ ನಾಟಕದ ಬಗ್ಗೆ ನಾನು ಹೇಳಿದ ವಿಷಯಗಳನ್ನು ತಿಳಿದುಕೊಂಡ, ಕೊಂಕಣಿ ಭಾಷೆಯ ಶ್ರೇಷ್ಠ ಸಾಹಿತಿ, ನಾಟಕ, ಬರಹಗಾರ, ಕೊಂಕಣಿ ಚಳವಳಿಯ ನೇತಾರ ಗೋವೆಯ ಶ್ರೀ ಪುಂಡಲೀಕ ಎನ್ ನಾಯಕ್‌ರವರು ಮಂಗಳೂರಿಗೆ ಬಂದಾಗ ಒಮ್ಮೆ ಸ್ವತಃ ಬಂಟವಾಳಕ್ಕೆ ಬಂದು ಚಂದ್ರಹಾಸ ನಾಟಕ ಪ್ರಥಮವಾಗಿ ಪ್ರದರ್ಶಿಸಿದ ಶ್ರೀ ವೆಂಕಟರಮಣ ಸ್ವಾಮಿ ದೇವಳ ಎಲಿಮೆಂಟರಿ ಶಾಲೆ, ದಿ. ಕೃಷ್ಣ ಪ್ರಭುಗಳು 1914 ರಲ್ಲಿ ಸ್ಥಾಪಿಸಿದ ವಿಕ್ಟೋರಿಯಾ ಮುದ್ರಣ ಶಾಲೆ (Victoria Printing Press) ಹಾಗೂ ಅಷ್ಟೇ ಹಳೆಯದಾದ ಚಂದ್ರಹಾಸ ನಾಟಕವನ್ನು ಮುದ್ರಿಸಿದ ಮುದ್ರಣ ಯಂತ್ರ (Printing

Machine) ಇತ್ಯಾದಿಗಳನ್ನು ನೋಡಿ ಸಂತೋಷ ಪಟ್ಟರು ಅಲ್ಲದೇ ನಾವೆಲ್ಲರೂ ಕೂಡಿ 1912 ಇಸವಿಯಲ್ಲಿ ರಂಗ ಮಂಚವನ್ನೇರಿದ ಚಂದ್ರಹಾಸ ನಾಟಕದ ಶತಮಾನೋತ್ಸವವನ್ನು ಅರ್ಥ ಪೂರ್ಣವಾಗಿ ವಿಜೃಂಭಣೆಯಿಂದ ಆಚರಿಸಬೇಕೆಂಬುದಾಗಿ ತಮ್ಮ ಮನದಾಳದ ಆಸೆಯನ್ನು ನನ್ನ ಮುಂದಿಟ್ಟರು. ಅವರ ಸಲಹೆಗಳ ಬಗ್ಗೆ ಸುಮ್ಮನಿರದೇ ಈ ಬಗ್ಗೆ ಬಂಟವಾಳದವರೇ ಆಗಿರುವ, ಮತ್ತು ವೈಯಕ್ತಿಕವಾಗಿ ನನ್ನನ್ನೂ ಕೂಡಿದ ಒಂದು ಪೀಳಿಗೆಯವರನ್ನು ಸಾಹಿತ್ಯಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತೊಡಗಿಸಿದ ಬಂಟವಾಳದ ಬಗ್ಗೆ ನಮ್ಮ ಹೃನ್ಮನಗಳಲ್ಲಿ ಅಭಿಮಾನವನ್ನು ತುಂಬಿಸಿದ ತುಳುನಾಡಿನ ಸಾಹಿತ್ಯಿಕ, ಸಾಂಸ್ಕೃತಿಕ ರಾಯಭಾರಿ ಮತ್ತು ಸ್ವತಹ ನನಗೆ ಗುರುಸಮಾನರಾದ, ಶ್ರೀ ಏರ್ಯ ಲಕ್ಷ್ಮೀ ನಾರಾಯಣ ಆಳ್ವರನ್ನು ಸಂಧಿಸಿ, ಶ್ರೀ ಪುಂಡಲೀಕ ನಾಯಕರ ಸೂಚನೆಗಳನ್ನು ಮುಂದಿಟ್ಟೆ ಅದನ್ನು ಶ್ರೀ ಆಳ್ವರವರು ಹೃತ್ಪೂರ್ವಕವಾಗಿ ಸ್ವಾಗತಿಸಿದರು. ಮತ್ತು ಅವರ ಸೂಚನೆಯಂತೆ ದಿನಾಂಕ:14–10–2009 ರಂದು ಬಂಟವಾಳದ ಶ್ರೀ ಯಶವಂತ ವ್ಯಾಯಾಮ ಶಾಲೆಯಲ್ಲಿ ಒಂದು ವಿಚಾರಗೋಷ್ಠಿಯನ್ನು ವಿಶ್ವ ಕೊಂಕಣಿ ಕೇಂದ್ರದ ವತಿಯಿಂದ ಏರ್ಪಡಿಸಲಾಗಿತ್ತು. ನಾಟಕ ರಂಗದಲ್ಲಿ ತೊಡಗಿಸಿಕೊಂಡ ಕಲಾವಿದರ, ನಾಟಕಕಾರರ ಸಮಾವೇಶ ಅದಾಗಿತ್ತು. ಬಂಟವಾಳದ ಗಾಯಕರು ಬೋಳಂತೂರು ಕೃಷ್ಣ ಪ್ರಭುಗಳವರು ರಚಿಸಿದ ಚಂದ್ರಹಾಸ ನಾಟಕದ ಗೀತಗಳನ್ನು ಸುಶ್ರಾವ್ಯವಾಗಿ ಹಾಡಿ ಪ್ರತಿನಿಧಿಗಳನ್ನು ರಂಜಿಸಿದರು. ನಂತರ 5–06–2011 ರಂದು ವಿಶ್ವ ಕೊಂಕಣಿ ಕೇಂದ್ರದಲ್ಲಿ ಮುಂಬಯಿ, ಗೋವೆ, ಕರ್ನಾಟಕ ಮತ್ತು ಕೇರಳ ರಾಜ್ಯಗಳಿಂದ ಬಂದ ಕೊಂಕಣಿ ನಾಟಕ ಸಾಹಿತ್ಯಕಾರರ ರಂಗಕರ್ಮಿಗಳ ಸಭೆಯಲ್ಲಿ ಚಂದ್ರಹಾಸ ನಾಟಕ ಶತಮಾನೋತ್ಸವವನ್ನು ವಿಜೃಂಭಣೆಯಿಂದ, ಆದರೆ ಅರ್ಥಪೂರ್ಣವಾಗಿ ಜರುಗಿಸಲು ಶ್ರೀ ಪುಂಡಲೀಕ ಎನ್ ನಾಯಕ್‌ರವರು ಮುಖ್ಯ ಸಂಚಾಲಕರಾಗಿರುವ ಒಂದು ಸಮಿತಿಯನ್ನು ರಚಿಸಲಾಯಿತು.

ಇದೀಗ 10–02–2012 ರಿಂದ 10–2–2013 ರವರೆಗೆ ವರ್ಷ ಪೂರ್ತಿಯಾಗಿ ಚಂದ್ರಹಾಸ ಕೊಂಕಣಿ ನಾಟಕ ಶತಮಾನೋತ್ಸವವನ್ನು ದೇಶದಲ್ಲಿಡೀ, ಚಂದ್ರಹಾಸ ನಾಟಕ ಪ್ರದರ್ಶನದೊಂದಿಗೆ ವಿಚಾರ ಗೋಷ್ಠಿಗಳನ್ನೂ (Seminars) ಕಾರ್ಯಶಾಲೆಗಳನ್ನೂ (Work Shops)ಏರ್ಪಡಿಸುವ ಯೋಜನೆಯನ್ನು ಹಾಕಿಕೊಂಡಿರುತ್ತೇವೆ. ಅಲ್ಲದೇ ಶ್ರೀ ಬೋಳಂತೂರು ಕೃಷ್ಣ ಪ್ರಭುಗಳವರ ಜೀವನ ಮತ್ತು ಕಾರ್ಯಗಳ ಬಗ್ಗೆ ಸಮಗ್ರ ಮಾಹಿತಿ ಕೊಡಬಲ್ಲ ಒಂದು ಪುಸ್ತಿಕೆಯನ್ನು ಹೊರತರಲು ಆಯೋಜಿಸಲಾಯಿತು.

ಬಂಟವಾಳಕ್ಕೆ ಇತ್ತೀಚೆಗೆ ಬಂದವರಾದರೂ, ಕನ್ನಡ ಭಾಷೆಯಲ್ಲಿ ಪ್ರಾವೀಣ್ಯವುಳ್ಳ, ಯಕ್ಷಗಾನದ ಕ್ಷೇತ್ರದಲ್ಲಿ ವಿಶೇಷವಾಗಿತೊಡಗಿಸಿಕೊಂಡಿರುವ ಶ್ರೀ ಬಿ. ಮಧುಕರ ಮಲ್ಯರವರಲ್ಲಿ ಪುಸ್ತಿಕೆಯನ್ನು

ಸಂಪಾದಿಸಿಕೊಡುವ ಬಗ್ಗೆ ಪ್ರಸ್ತಾವಿಸಿದಾಗ ಅವರು ತುಂಬು ವಿಶ್ವಾಸದಿಂದ ನಮ್ಮ ವಿನಂತಿಯನ್ನು ಮನ್ನಿಸಿ ಈ ದಿಶೆಯಲ್ಲಿ ಕಾರ್ಯೋನ್ಮುಖರಾದರು.

ಇದೊಂದು ತುಂಬಾ ಕಷ್ಟಕರವಾದ ವಿಷಯವೆಂದು ನನ್ನ ಅರಿವಿನಲ್ಲಿತ್ತು. ಮತ್ತು ಶ್ರೀ ಮಲ್ಯರು ಸಂಪಾದಿಸಿಕೊಟ್ಟಿರುವ ಪುಸ್ತಿಕೆಯನ್ನು ಓದಿದಾಗ ಅವರು ಈಗಿನ ಕಾಲಕ್ಕೆ ದುರ್ಲಭವಾಗಿರುವ ಶ್ರೀ ಕೃಷ್ಣ ಪ್ರಭುಗಳ ಬಗ್ಗೆ ಹಾಗೂ ಅವರ ಸಾಹಿತ್ಯ ಕೃಷಿ ಬಗ್ಗೆ ಮತ್ತು ಚಂದ್ರಹಾಸ ನಾಟಕ ಹಾಗೂ ಇತರ ಕೃತಿಗಳ ಬಗ್ಗೆ ಅನೇಕ ಮಾಹಿತಿಗಳನ್ನು ಛಲದಿಂದ ಕಲೆಹಾಕಿ ಪುಸ್ತಿಕೆಯನ್ನು ಬರೆದಿರುತ್ತಾರೆ ಎಂಬುವುದನ್ನು ಕಾಣಬಹುದು. ಶ್ರೀ ಮಧುಕರ ಮಲ್ಯರಿಗೆ ನಾನು ಋಣಿ.

ಮಲ್ಯರು ಸಂಪಾದಿಸಿದ ಶ್ರೀ ಬೋಳಂತುರು ಕೃಷ್ಣ ಪ್ರಭುಗಳ ಜೀವನ ವೃತ್ತಾಂತದ ಮುನ್ನುಡಿಯನ್ನು ಬರೆದು ಕೊಡಲು ಹಿರಿಯರಾದ ಶ್ರೀ ಲಕ್ಷ್ಮೀನಾರಾಯಣ ಆಳ್ವರನ್ನು ವಿನಂತಿಸಿದಾಗ ಅವರು ಸಂತೋಷದಿಂದ ಒಪ್ಪಿಕೊಂಡರು ಮತ್ತು ಪುಸ್ತಿಕೆಗೆ ತಿಲಕ ಪ್ರಾಯವಾಗಿ ಮುನ್ನುಡಿಯನ್ನು ಬರೆದು ಕೊಟ್ಟರು. ಅವರಿಗೆ ನಮೋ ಎನ್ನುತ್ತೇನೆ.

ಅಲ್ಲದೆ ಪುಸ್ತಿಕೆಗೆ ಒಂದು ರೂಪು ರೇಷೆ (design) ಯನ್ನು ವಿಶ್ವ ಕೊಂಕಣಿ ಕೇಂದ್ರದ, ವಿಶ್ವ ಕೊಂಕಣಿ ಭಾಷಾ ಸಂಸ್ಥಾನದ ಉಪನಿರ್ದೇಶಕ ಶ್ರೀ ಗುರುದತ್ತ ಬಂಟವಾಳಕಾರ್ ರವರು ರಚಿಸಿದ್ದಾರೆ. ಹಾಗೂ ಶ್ರೀ ಪಿ. ಮೋಹನದಾಸ ಭಂಡರಿಯವರು ತಮ್ಮ ಶೃತಿ ಪ್ರಿಂಟರ್ಸ್ ಇಲ್ಲಿ ಅಂದವಾಗಿ ಮುದ್ರಿಸಿ ಕೊಟ್ಟಿರುತ್ತಾರೆ. ಅವರಿಗೆ ನಮ್ಮ ವಿಶ್ವ ಕೊಂಕಣಿ ಕೇಂದ್ರದ ವತಿಯಿಂದ ವಂದನೆಗಳು.

**ವಿಶ್ವ ಕೊಂಕಣಿ ಕೇಂದ್ರ**
**ಮಂಗಳೂರು**
ದಿ. 10-2-2012

**ಬಸ್ತಿ ವಾಮನ ಶೆಣೈ**
**ಅಧ್ಯಕ್ಷ**
**ಕೊಂಕಣಿ ಭಾಸ ಆನಿ ಸಂಸ್ಕೃತಿ ಪ್ರತಿಷ್ಠಾನ**



ಬಂಟ್ವಾಳ ನೇತ್ರಾವತಿ ನದಿ



ಬಂಟ್ವಾಳ ಶ್ರೀ ತಿರುಮಲ ವೆಂಕಟರಮಣ ಸ್ವಾಮಿ ದೇವಸ್ಥಾನದ ಹೆಬ್ಬಾಗಿಲು



ಬಂಟ್ವಾಳ ವೆಂಕಟರಮಣ ಸ್ವಾಮಿ ದೇವರ ಬ್ರಹ್ಮರಥ



ಬೊಳಂತೂರು ಕೃಷ್ಣ ಪ್ರಭು ಸಂಸ್ಮರಣೆ ಸಮಾರಂಭದಲ್ಲಿ
ಶ್ರೀ ಬಿ. ದಾಮೋದರ ಪ್ರಭುಗಳು ಮಾತನಾಡುತ್ತಿರುವರು.

ಎಡದಿಂದ ಶ್ರೀ ಬಿ.ಲಕ್ಷ್ಮೀನಾರಾಯಣ ಪ್ರಭು (ದಿ. ಕೃಷ್ಣ ಪ್ರಭುಗಳ ಪುತ್ರ) ಶ್ರೀ ಬಿ.ವಿ. ಬಾಳಿಗಾ (ಸಂಪಾದಕರು ಪಂಚ್ಕಾದಾಯಿ) ಫಾ। ಮಾರ್ಕ್ ವಾಲ್ಡರ್, (ಸಂಪಾದಕರು ರಾಕ್ಣೊ) ಪ್ರಸಿದ್ಧ ಕೊಂಕಣಿ ಸಾಹಿತಿ ಎ.ಜೆ.ಪಿ. ಸಲ್ದಾನಾ

## ಕೊಂಕಣಿ ರಂಗ ಭೂಮಿಯ ನಿರ್ಮಾತೃ

# ಬೋಳಂತೂರು ಕೃಷ್ಣ ಪ್ರಭು

ಚಿಂತೆಚೆ ವಿಸ್ತಾರ ಪಟ್ಟಣ। ಮ್ಹಾಂತಾರ್ಪಣ ॥ ಪ॥
ಮ್ಹಾಂತಾರೇಕ ವಾಟ್ಟೇರಿ । ಹೊಂತಗಾರ ಚೊಯ್ಲ್ಯಾರಿ ।
ದಾಂತ ಸೋಣು । ನಿಂದಾ ಕೋರ್ನು । ಪಂಥು ಮೆರ್ಸಿತಾತಿ ಯೇವ್ನು ॥1॥
ದುಡ್ಡು ನಾತ್ತಿಲೆಂ ಹಾತ್ತಾಂತು । ಹಾಡ್ಡ ಜೊರೊನ್ ವತ್ತಾಂತು ।
ಬುಡ್ಡಿ ದೊರ್ನು ಗುಡ್ಡಿ ಜಾಲ್ಲಿಂ । ಉಡ್ಡುನುಡ್ಡುನು ಚಮ್ಕುನ್ ಮೆಲ್ಲಿಂ ॥2 ॥
ಇಷ್ಟ ಮಾಕ್ಕಾ ಭೊಂವ್ಹಾಂತು । ದೃಷ್ಟಿ ಮಂದ ಕಾಳ್ಕಾಂತು
ಮುಷ್ಟಿಂ ಭೇತ – ಫಾಟ್ಟಿರ್ವತ ಕಷ್ಟ ಕೋಣಾಂ ಕಳ್ಸ್ಸತ ॥3॥

ಕೊಂಕಣಿ ಭಾಷೆಯನ್ನಾಡುವ ಸಮಾಜದಲ್ಲಿ ಹಲವು ದಶಕಗಳಿಂದ ಮನೆ ಮಾತಾಗಿರುವ ಸುಪ್ರಸಿದ್ಧ ಪದ್ಯದ ಸಾಲುಗಳಿವು. ಯಾರೇ ವೃದ್ಧರಿರಲಿ – "ಏನು ಸ್ವಾಮಿ? ಹೇಗಿದ್ದೀರಿ?" ಎಂದು ಕೇಳಿದರೆ ಸಾಕು, ಮೇಲಿನ ಗೀತೆಯ ಎರಡು ಸಾಲುಗಳನ್ನಾದರೂ ಅವರು ಉದ್ಧರಿಸದೆ ಬಿಡರು. ಪ್ರತಿಯೊಬ್ಬ ವೃದ್ಧರಿಗೂ ಮೇಲಿನ ಪ್ರತಿಯೊಂದು ಸಾಲು ಕೂಡ ತಮ್ಮನ್ನೇ ಉದ್ದೇಶಿಸಿ ಹೇಳಿರಬೇಕು ಎಂಬ ಭಾವ ಬಾರದಿರದು. ಅಷ್ಟೊಂದು ಅನುಭವ ಪೂರ್ಣ ಸಾಲುಗಳಿವು. ಅಂತೆಯೇ ಹಿಂದಿನ 4–5 ದಶಕಗಳಿಂದ ನಾಟಕ ಯಾವುದೇ ಇರಲಿ, ಕಥೆ ಎಂತೇ ಇರಲಿ, ವೃದ್ಧರ ಪಾತ್ರವೊಂದಿದೆ ಎಂದಾದರೆ ಮೇಲಿನ ಪದ್ಯಗಳ ಸಾಲು ಹಿನ್ನೆಲೆಯಲ್ಲಿ ಬರುವುದು ಖಂಡಿತ! ಅಷ್ಟರ ಮಟ್ಟಿಗೆ ಕೊಂಕಣಿ ರಂಗಭೂಮಿ ಮಾತ್ರವಲ್ಲ, ಕೊಂಕಣಿ ಸಮಾಜದಲ್ಲಿ ಹಾಸು ಹೊಕ್ಕಾಗಿದೆ ಈ ಪದ್ಯ.

ಇಂದಿಗೆ 100 ವರ್ಷಗಳ ಹಿಂದೆ ಬಂಟ್ವಾಳ ನಿವಾಸಿ ಬೋಳಂತೂರು ಕೃಷ್ಣ ಪ್ರಭುಗಳು ರಚಿಸಿ ರಾಗಸಂಯೋಜನೆ ಮಾಡಿದ ಪ್ರಪ್ರಥಮ ಪ್ರಕಟಿತ ಕೊಂಕಣಿ ನಾಟಕ "ಚಂದ್ರಹಾಸ"ದಲ್ಲಿನ ಗೀತ ಸಾಲುಗಳಿವು ಎನ್ನುವುದನ್ನು ತಿಳಿದವರೆಷ್ಟೋ!

ಕೊಂಕಣಿ ಸಮಾಜದಲ್ಲಿ ಜನನಕ್ಕೆ ಬಂದ ತಾನು, ಸ್ವಲ್ಪವಾದರೂ ಆ ಭಾಷಾಭಿವೃದ್ಧಿಗಾಗಿ ದುಡಿಯಬೇಕು ಎಂಬ ಸದುದ್ದೇಶವನ್ನಿರಿಸಿಕೊಂಡು ಕೃಷ್ಣ ಪ್ರಭುಗಳು ಕೊಂಕಣಿ ಭಾಷೆಯಲ್ಲಿ ಕಥೆ, ಕವನ, ನಾಟಕ ಇತ್ಯಾದಿ ವಿವಿಧ ಸಾಹಿತ್ಯ ಪ್ರಕಾರ ರಚನೆ ಮಾಡಿದ ಮೊದಲ ನಾಟಕಕಾರ, ಕವಿ, ಸಂಗೀತ ಸಂಯೋಜಕರು. ಕೇವಲ ಪ್ರಾಥಮಿಕ ಶಾಲಾ ವಿದ್ಯಾಭ್ಯಾಸ ಹೊಂದಿದ ಶ್ರೀಯುತರು ಕೊಂಕಣಿ ಮತ್ತು ಕನ್ನಡ ಉಭಯ ಭಾಷೆಗಳಲ್ಲೂ ಸಮೃದ್ಧ ಸಾಹಿತ್ಯ ರಚನೆ ಮಾಡಿ, ವಿಶೇಷವಾಗಿ ಕೊಂಕಣಿ ರಂಗಭೂಮಿಗೆ ಅತ್ಯಮೂಲ್ಯ ಕೊಡುಗೆ ನೀಡಿದರು.

ಅವರು ರಚಿಸಿದ ಸಂಗೀತ ನಾಟಕ "ಚಂದ್ರಹಾಸ" ಕೊಂಕಣಿ ಭಾಷೆಯ ಪ್ರಪ್ರಥಮ ಪ್ರಕಟಿತ ನಾಟಕವೆಂದು ಪರಿಗಣಿಸಲ್ಪಟ್ಟಿದೆ. ಪ್ರಹ್ಲಾದ ಚರಿತ್ರ, ಧ್ರುವಚರಿತ್ರೆ, ನಳಚರಿತ್ರ, ದ್ರೌಪದಿ ವಸ್ತ್ರಾಯಣ, ಶ್ರೀ ಕೃಷ್ಣ ಜನ್ಮಾಷ್ಟಮಿ, ಕೃಷ್ಣ ಸತ್ಯಭಾಮ ಸಂವಾದ ಇನ್ನಿತರ ಕೊಂಕಣಿ ಕೃತಿಗಳು.

ಅವರು ಬರೆದ ಸಣ್ಣವರ ಸುಬೋಧ ಶತಕವನ್ನು ಅಂದಿನ ಮದ್ರಾಸು ಸರಕಾರ ಶಾಲೆಗಳ ಪಠ್ಯಪುಸ್ತಕವನ್ನಾಗಿ ಸ್ವೀಕರಿಸಿತ್ತು. ಮೃಚ್ಛಕಟಿಕ, ಮಹಾಸಾಧು ಕವಿಜಯದೇವ ಕೃತಿಗಳನ್ನು ಕನ್ನಡದಲ್ಲಿ ರಚಿಸಿ ಕನ್ನಡಾಭಿಮಾನವನ್ನೂ ಮೆರೆದರು.

ಶ್ರೀ ಪ್ರಭುಗಳು ಕೊಂಕಣಿ, ಕನ್ನಡ, ಸಂಸ್ಕೃತ, ಮರಾಠಿ, ಬಂಗಾಲಿ, ತುಳು ಹಾಗೂ ಮಲೆಯಾಳಂ ಭಾಷೆಗಳಲ್ಲಿ ಪ್ರಭುತ್ವ ಪಡೆದಿದ್ದರು. ಸಮಾಜದ ಜನರಿಗೆ ಉತ್ತಮ ಸಂಸ್ಕಾರವನ್ನೀಯಬೇಕು ಎಂಬ ಕಾಳಜಿ ಹೊಂದಿ, ಗುರುಹಿರಿಯರಿಗೆ ಆದರ ಮನ್ನಣೆ ತೋರಿ, ದೇವರಲ್ಲಿ ಅಪಾರ ಭಕ್ತಿ ವಿಶ್ವಾಸ ಇಟ್ಟು, ಸ್ವಾತಂತ್ರ್ಯ ಚಳುವಳಿಗೆ ಸ್ಫೂರ್ತಿಯ ಸೆಲೆಯಾಗಿ, ತಮ್ಮ ವಿಕ್ಟೋರಿಯಾ ಮುದ್ರಣಾಲಯದ ಮೂಲಕ ಸರಸ್ವತಿಯ ಕೈಂಕರ್ಯ ಕೈಗೊಂಡ ಕರ್ಮಯೋಗಿಯಾಗಿ, ತುಂಬು ಜೀವನ ನಡೆಸಿದ ಅಪ್ಪಟ ಮಾತೃಭಾಷಾ ಪ್ರೇಮಿ ಬೋಳಂತೂರು ಕೃಷ್ಣ ಪ್ರಭುಗಳ ಜೀವನ ಚರಿತ್ರೆ ಕೊಂಕಣಿ ಭಾಷಾಭಿಮಾನಿಗಳಿಗೆ ಚೇತೋಹಾರಿ.

**ಬೋಳಂತೂರು, ಬಂಟ್ವಾಳ ಅವಿನಾಭಾವ ಸಂಬಂಧ**

ಸಮೃದ್ಧ ಸುಸಂಸ್ಕೃತ ಶಿಕ್ಷಣದ ಶ್ರೀಮಂತ ನೆಲೆ ದಕ್ಷಿಣ ಕನ್ನಡ. ಭೌಗೋಳಿಕವಾಗಿ, ಧಾರ್ಮಿಕ ವ್ಯಾವಹಾರಿಕ, ನೈಸರ್ಗಿಕ, ಶೈಕ್ಷಣಿಕ, ರಾಜಕೀಯ ಹೀಗೆ ಯಾವುದೇ ಕ್ಷೇತ್ರಗಳ ಸಿರಿವಂತಿಕೆಯಲ್ಲಿ ಈ ಜಿಲ್ಲೆಯವರ ಕೊಡುಗೆ ಗಮನಾರ್ಹವಾದುದು. ಅತ್ತ ಕಡಲಹರವು, ಇತ್ತ ನದಿ ನದಗಳ ಚೆಲುವ ಹರಿವು, ಕಣ್ಣಿಗೊತ್ತಿ ಬರುವ ಹಚ್ಚ ಹಸಿರ ದೇವ ಸಿರಿಯ ವರವು, ದಕ್ಷಿಣ ಕನ್ನಡ ಜಿಲ್ಲೆಯನ್ನು ಪ್ರಾಕೃತಿಕವಾಗಿ ಸಗ್ಗ ಸಮಾನವಾಗಿಸಿದೆ.

ಜಿಲ್ಲಾ ಕೇಂದ್ರ ಮಂಗಳೂರಿನಿಂದ 25 ಕಿ.ಮೀ ಪೂರ್ವದಲ್ಲಿ ನೇತ್ರಾವತಿ ನದಿಯ ತೀರದಲ್ಲೊಂದು ಚಿಕ್ಕ ಊರು ಬಂಟವಾಳ. ವಿಸ್ತಾರದ ದೃಷ್ಟಿಯಿಂದಷ್ಟೇ ಚಿಕ್ಕದು. ರಾಜಕೀಯ, ಧಾರ್ಮಿಕ. ವ್ಯಾವಹಾರಿಕ, ಸಾಹಿತ್ಯ ಮೊದಲಾದ ವಿವಿಧ ಕ್ಷೇತ್ರಗಳಲ್ಲಿ ಅಧ್ಯಯನ ಶೀಲರಿಗೆ ಅರಿವಿದೆ ಬಂಟವಾಳದ ಕೊಡುಗೆ ಉಲ್ಲೇಖಾರ್ಹ ಎಂದು. ಇದು ಕನ್ನಡ, ತುಳು, ಮತ್ತು ಕೊಂಕಣಿ ಭಾಷೆಗಳಿಗೂ ಅನ್ವಯ.

ಇಲ್ಲಿಯ ನೇತ್ರಾವತಿಯ ನೆರೆಯಬ್ಬರ, ಮಳೆಗಾಲದಲ್ಲಿ ವೇಗವಾಗಿ ಹರಿವ ಭರ ಭಯವನ್ನು ಹುಟ್ಟಿಸುತ್ತದೆ. ನುರಿತ ದೋಣಿಕಾರರ ದೋಣಿಯಲ್ಲಿ ಕುಳಿತು

ಕಲ್ಲುಗಳೆಡೆಯ ನೀರದಾರಿಯಲ್ಲಿ ಅರೆತಾಸು ಪಯಣಿಸಿದರೆ ಪಕ್ಕದೂರು ಪಾಣೆಮಂಗಳೂರು ಆಗಿನ್ನೂ ಸೇತುಬಂಧ ಆಗಿರಲಿಲ್ಲ. ಅಲ್ಲಿಂದ ಎತ್ತಿನ ಗಾಡಿಯಲ್ಲಿ ಏಳು ಮೈಲು ಪ್ರಯಾಸದ ಪ್ರಯಾಣ. ಏರುತಗ್ಗುಗಳಿಂದೊಡಗೂಡಿದ ದಾರಿ. ಒಟ್ಟಿನಲ್ಲಿ ದೋಣಿ, ಗಾಡಿ ಲಭ್ಯತೆಯನ್ನು ಹೊಂದಿ ಇಡಿಯ ದಿನದ ಪಯಣ, ಸೇರುವ ಊರೇ ಬೋಳಂತೂರು, ಆ ಕಾಲದಲ್ಲಿ ತೀರ ಕುಗ್ರಾಮ. ಕೃಷಿ ಪ್ರಧಾನ. ಅಲ್ಲಲ್ಲಿ ತೆಂಗು ಕಂಗಿನ ಸಿರಿದರ್ಶನ. ವಿಶಾಲ ಬಯಲು, ಆರಕ್ಕೇರದ ಮೂರಕ್ಕಿಳಿಯದ ಶ್ರಮಿಕರ ಪುಟ್ಟ ನೆಲೆ. ಪ್ರತಿಯೊಂದಕ್ಕೂ ಬಂಟವಾಳವೇ ಆಸರೆ. ಮುಖ್ಯ ಪಟ್ಟಣ. ತಾಲೂಕು ಕೇಂದ್ರವೂ ಹೌದು.

ಆಸ್ತಿವಂತ ಬೋಳಂತೂರು ಗೋವಿಂದ ಪ್ರಭು ಹಾಗೂ ಶ್ರೀಮತಿ ಪೊಮ್ಮಿ ದಂಪತಿಗಳ ಏಕಮಾತ್ರ ಪುತ್ರ ಬೋಳಂತೂರು ಕೃಷ್ಣ ಪ್ರಭು 1882 ರಲ್ಲಿ ಜನಿಸಿದರು. ಕೃಷಿ ಕಾಯಕದ ಆಕಸ್ಮಿಕ ಅವಗಢದಲ್ಲಿ ತಂದೆ ತೀರಿದಾಗ ಕೃಷ್ಣ ಪ್ರಭು ಮೂರು ವರ್ಷದ ಹಸುಗೂಸು. 1885 ರಲ್ಲಿ ಕನ್ನಡಿ ಬಾಗಿಲು ಮನೆ ಸಾಹುಕಾರ್ ಅಪ್ಪಯ್ಯ ಪ್ರಭು ಕುಟುಂಬದ ಸಾಹುಕಾರ್ ರಾಮಚಂದ್ರ ಪ್ರಭುಗಳು ತನ್ನ ಮಗಳು ಪೊಮ್ಮಿಯೊಂದಿಗೆ ಮೊಮ್ಮಗು ಕೃಷ್ಣನನ್ನು ಬಂಟ್ವಾಳಕ್ಕೆ ಕರೆತಂದು ತಮ್ಮಲ್ಲೇ ಉಳಿಸಿಕೊಂಡರು. ಬೋಳಂತೂರು ಕೃಷ್ಣ ಪ್ರಭು ಬಂಟ್ವಾಳದವರಾದುದು ಹೀಗೆ. ಅಜ್ಜಿಯ ಊರು, ತಾಯಿಯ ತವರೂರು. ಅಜ್ಜ ರಾಮಚಂದ್ರ ಪ್ರಭುಗಳ ಅಚ್ಚುಮೆಚ್ಚಿನ ಮೊಮ್ಮಗು ಕೃಷ್ಣ ಮನೆಮಂದಿಯ ಪ್ರೀತಿಯ ಕರೆಯಲ್ಲಿ ದಾಸಪ್ಪನಾದ. ಸ್ಥಳೀಯ ಬಾಸೆಲ್‌ಮಿಶನ್ ಶಾಲೆಗೆ ಸೇರಿ 7ನೇ ತರಗತಿಯ ವರೆಗೆ ವಿದ್ಯಾಭ್ಯಾಸ. ಕಲಿಕೆಯಲ್ಲಿ ವಿಶೇಷ ಚೂಟಿ. ಸೋದರಮಾವ ಶ್ರೀನಿವಾಸ ಪ್ರಭುಗಳಿಂದ ಆಧ್ಯಾತ್ಮಿಕ ಸಂಸ್ಕಾರದ ಭದ್ರಬುನಾದಿ. ಗೌರವರ್ಣದ ಗುಂಡುಗುಂಡಾಗಿದ್ದ ಈ ಪುಟ್ಟ ದಾಸಪ್ಪ ಶಾಲೆಯಲ್ಲೂ ಮನೆಯಲ್ಲೂ ಎಲ್ಲರ ಅಕ್ಕರೆಯ ಆರೈಕೆಯಲ್ಲಿ ಬೆಳೆದ.

ಸಾತ್ವಿಕ ಸ್ವಭಾವದ ಆಕರ್ಷಕ ವ್ಯಕ್ತಿತ್ವದ ಕೃಷ್ಣ 20ರ ಹರೆಯದಲ್ಲಿ ಮದುವಣಿಗನಾದನು. ಸ್ಕೋರೆ ಮನೆ ಅನಂತ ಪದ್ಮನಾಭ ಪ್ರಭುಗಳ ಮಗಳು ಅಪ್ಪಿ ಯಾನೆ ಆನಂದಿ ಎಂಬ ಕನ್ಯೆ ಕೃಷ್ಣಪ್ರಭುಗಳ ಮನೆ ಮನ ತುಂಬಿದರು. ತಿರುಮಲ ವೆಂಕಟರಮಣ ದೇವಸ್ಥಾನದ ಎದುರಿನ ರಥಬೀದಿಯಲ್ಲೇ ಮದುವೆ ಮಂಟಪ. ಸುಂದರ ಸುಮಧುರ ದಾಂಪತ್ಯ. ಮೂರು ಗಂಡು, ಮೂರು ಹೆಣ್ಣು ಮಕ್ಕಳ ತುಂಬು ಸಂಸಾರ. ವಿಧಿಯಾಟ ಬಲ್ಲವರಾರು? ಅನಿರೀಕ್ಷಿತ ಸಂಸಾರ ನೌಕೆಯ ಹಾಯಿ ಕಡಿಯಿತು. ಶ್ರೀಮತಿ ಅಪ್ಪಿ ಅಕಾಲ ಮರಣವನ್ನಪ್ಪಿದರು. ಕೃಷ್ಣಪ್ರಭು ಅನಾಥ ಪ್ರಜ್ಞೆಯಿಂದ ಬಳಲಿದರು.

ಹಿರಿಯರಿಂದ ತುಂಬು ಯೌವನದ ಸಂಸಾರ ನೌಕೆಯನ್ನು ಸುಸ್ಥಿತಿಗೆ ತರುವ ಪ್ರಯತ್ನ ಸಾಗಿತು. ಉದ್ಯಮಿ ಭಾಮಿ ಗಣಪತಿ ಶೆಣ್ಯೆಯವರ ಪುತ್ರಿ ಸಂಜೀವಿ ಯಾನೆ ಸುಲೋಚನಾ ಬ್ಯಾಯವರೊಂದಿಗೆ ಮರು ವಿವಾಹ ಸರಳವಾಗಿ ಸಂಪನ್ನಗೊಂಡಿತು. ಈ ಸಂಸಾರ ವೃಕ್ಷದಲ್ಲಿ ಎರಡು ಗಂಡು, 4 ಮಂದಿ ಹೆಣ್ಣು ಮಕ್ಕಳು ಸತ್ಫಲಗಳು.

| | |
|---|---|
| ಬೋಳಂತೂರು ಕೃಷ್ಣಪ್ರಭು ಯಾನೆ ಮಾಧವ ಪ್ರಭುಗಳ | ಸಾಹುಕಾರ್ ರಾಮಚಂದ್ರ ಪ್ರಭುಗಳ |
| ಪುತ್ರ | ಪುತ್ರಿ |
| ಬೋಳಂತೂರು ಗೋವಿಂದ ಪ್ರಭು | ಶ್ರೀಮತಿ ಪೊಮ್ಮಿ |

ಪುತ್ರ
ಬೋಳಂತೂರು ಕೃಷ್ಣ ಪ್ರಭು

| ಪತ್ನಿ ಶ್ರೀಮತಿ ಅಪ್ಪಿ ಯಾನೆ ಆನಂದಿ ಬ್ಯಾ | ಪತ್ನಿ ಶ್ರೀಮತಿ ಸಂಜೀವಿ ಯಾನೆ ಸುಲೋಚನಾ |
|---|---|
| 1) ಗೋವಿಂದ ಪ್ರಭು | 1) ಲಲಿತಾ |
| 2) ನಾಗೇಶ ಪ್ರಭು | 2) ಪ್ರೇಮಾ |
| 3) ಲಕ್ಷ್ಮೀನಾರಾಯಣ ಪ್ರಭು | 3) ವಸಂತ ಮಾಧವ ಪ್ರಭು |
| 4) ಜಾಹ್ನವಿ | 4) ವಿಶ್ವನಾಥ ಪ್ರಭು |
| 5) ಸುಮಿತ್ರಾ | 5) ವಿಜಯಾ |
| 6) ಮುಕ್ತಾ | 6) ನಾರಾಯಣಿ |

### ವ್ಯಕ್ತಿ, ವ್ಯಕ್ತಿತ್ವ

ನೀಳ ಕಾಯ, ಸುಂದರ ಗೌರವರ್ಣ, ನಗುಮೊಗದ ಸಾತ್ವಿಕ ವ್ಯಕ್ತಿತ್ವ. ಸ್ವಚ್ಛ ಶುಭ್ರ ಶ್ವೇತ ಖಾದಿ ಧೋತಿ, ಬಿಳಿಯ ಶರ್ಟಿನ ಮೇಲೊಂದು ಕಡು ಬಣ್ಣದ ಕೋಟು. ತಲೆಗೆ ಪೇಟಾ, ಶಿಸ್ತಿನ ಸಿಪಾಯಿ. ಸಂಸಾರದಲ್ಲಿ ವಿನೋದ ಪ್ರವೃತ್ತಿಯ ನಗು ನುಡಿಗಳಿಂದ ಕಠಿಣ ಸನ್ನಿವೇಶವನ್ನು ತಿಳಿಗೊಳಿಸುವ ಜಾಣ್ಮೆ. ರಣರಂಪವಾಗಿರುವ ಮನೆ ತುಂಬ ಮಕ್ಕಳ ಗಲಾಟೆ ಗೌಜು ಅಪ್ಪನ ಬೀಗದ ಗೊಂಚಲ ಸಪ್ಪಳ ಕೇಳಿದಾಕ್ಷಣ ಧ್ಯಾನ ಮೌನ. ಆಡದೇ ಕಾರ್ಯಗತವಾಗುವ ಶಿಸ್ತು. ಮುಂಜಾನೆ ಕತ್ತಲು ಕಳೆವ ಮೊದಲೇ ಎದ್ದು ಸ್ನಾನ ಸಂಧ್ಯಾವಂದನಾದಿಗಳು ಮುಗಿದ ಮೇಲೆಯೇ ಬಾಯಿಗೆ

ನೀರು. ವೆಂಕಟ್ರಮಣನ ದರ್ಶನ ನಿತ್ಯದ ಭಕ್ತಿ ಶ್ರದ್ಧಾಪೂರ್ಣ ಕಾಯಕ. ನಿರಂತರ ಓದು, ಬರವಣಿಗೆ. ದೇಹಾಲಸ್ಯದ ವಿಶ್ರಾಂತಿ ಕಾಲದಲ್ಲೂ ಮಕ್ಕಳು ಪಠಿಸುವ ವಿಷ್ಣು ಸಹಸ್ರನಾಮದ ಕಡೆಗೆ ಲಕ್ಷ್ಯ. ಒಂದಕ್ಷರ ತಪ್ಪಿದರೆ ಏನೋ ದೊಡ್ಡ ಅನಾಹುತವಾಯಿತು ಎಂಬಂತೆ ಅವಾಂತರ. ಮಲಗಿದ್ದಲ್ಲಿಂದಲೇ ಕೋಪದ ಬಿರುನುಡಿಯ ತಿದ್ದುವಿಕೆ. ಏರು ಜವ್ವನದಲ್ಲಿ ಆರಂಭಿಸಿದ ವೇದಾಧ್ಯಯನ ಇಳಿವಯಸ್ಸಿನಲ್ಲಿಯೂ ನಿರತ ನಿರಂತರ. ಕಾಯಾ ವಾಚಾ ಮನಸಾ ಸನಾತನ ಸಂಸ್ಕೃತಿಯ ಪಡಿಯಚ್ಚು. ಕಾಲ ಸಹಜ ಬಡತನದಲ್ಲೂ ಸಂಸಾರಕ್ಕೆ ಹಬ್ಬ ಹುಣ್ಣಿಮೆಗಳ ಹೋಳಿಗೆಯ ಸಂಭ್ರಮವನ್ನು ಕಾಣಿಸುವಲ್ಲಿ ಎಡವಲಿಲ್ಲ. ಹಬ್ಬ ಹರಿದಿನಗಳು ದಿನಚರಿಯಲ್ಲಿ ಕಲಿತ ಸದಾಚಾರವನ್ನು ಸಾಕಾರಗೊಳಿಸುವ ಗಟ್ಟಿದಿನಗಳು ಎಂದು ದೃಢವಾಗಿ ನಂಬಿದವರು ಪ್ರಭುಗಳು. ನಂಬಿದಂತೆ ನುಡಿದರು, ನುಡಿದಂತೆ ಬಾಳಿದರು. ಕಾಯ ಅಳಿದರೂ ಕೃತಿ ರೂಪದಲ್ಲಿ ಉಳಿದರು.

**ಅಕ್ಷರಸೇವೆ**

ಬಂಟ್ವಾಳ ಶ್ರೀ ಮಹಾಲಿಂಗೇಶ್ವರ ದೇವಸ್ಥಾನದ ಪಕ್ಕದ ಬೋರ್ಡ್ ಸ್ಕೂಲ್ ಎಂದು ಕರೆಯಲ್ಪಡುವ ಕಟ್ಟಡದಲ್ಲಿ ಕೋರ್ಟು ಇತ್ತು. ಸಾತ್ವಿಕ ಸ್ವಭಾವದ ಸುಂದರ ಕೈ ಬರಹದ ಕೃಷ್ಣ ಪ್ರಭು ಇಲ್ಲಿ ಗುಮಾಸ್ತರಾಗಿ ವೃತ್ತಿ ಆರಂಭಿಸಿದರು. ಅವರ ದಣಿವಿರದ ಕಾಯಕ ಪ್ರೀತಿ, ಶ್ರೇಷ್ಠ ಬರಹ ಮೇಲಧಿಕಾರಿಗಳ ಮುಕ್ತ ಪ್ರಶಂಸೆಗೆ ಪಾತ್ರವಾಯಿತು. ಕಛೇರಿಗೆ ಬರುವ ಗ್ರಾಮೀಣ ಅನಕ್ಷರಸ್ಥರಿಗೆ ಕೃಷ್ಣಪ್ರಭು ಮಾರ್ಗದರ್ಶಿಯಾದರು. ಆದರೆ ಅಂತರಂಗದಲ್ಲಿ ಮಡುಗಟ್ಟಿದ ಸರಸ್ವತಿ ಸೇವೆಯ ತುಡಿತ ಅವರನ್ನು ಕ್ಲರ್ಕ್ ಕೆಲಸಕ್ಕೆ ಸೀಮಿತಗೊಳಿಸಲಿಲ್ಲ. ಮುದ್ರಣಾಲಯವೊಂದನ್ನು ಸ್ಥಾಪಿಸಿ, ಅಕ್ಷರ ಸೇವೆಯಲ್ಲಿ ತನ್ನನ್ನು ಸಕ್ರಿಯ ತೊಡಗಿಸಿಕೊಳ್ಳಬೇಕು ಎಂಬ ಅವರ ಮನದಾಳದ ಆಸೆ ಬಂಟ್ವಾಳದ ಮುಖ್ಯರಸ್ತೆಯ ಬಳಿ ವಿಕ್ಟೋರಿಯಾ ಪ್ರೆಸ್ ಸ್ಥಾಪನೆಗೆ ನಾಂದಿಹಾಡಿತು. ಪ್ರೆಸ್ಸಿನ ದಾಸಪ್ಮಾಮ್ ಆದರು.

**"ಪರ್ಮೀಶನ್" ಪ್ರಹಸನ**

1914 ಭಾರತದಲ್ಲಿ ಆಂಗ್ಲ ಆಳ್ವಿಕೆಯ ದರ್ಪದ ಕಾಲ. ಮುದ್ರಣಾಲಯ ಮತ್ತು ಮುದ್ರಣ ಚಟುವಟಿಕೆಗಳನ್ನು ಬ್ರಿಟಿಷರ ವಿರುದ್ಧದ ಸ್ವಾತಂತ್ರ್ಯ ಹೋರಾಟದ ಹಿನ್ನೆಲೆಯಲ್ಲಿ, ಅನುಮಾನಾಸ್ಪದವಾಗಿ ನೋಡಿಕೊಳ್ಳುತ್ತಿದ್ದ ಸಂದರ್ಭ. ಆಂಗ್ಲರ ಅಪ್ಪಣೆ ವಿನಃ ಮುದ್ರಣಾಲಯ ಸ್ಥಾಪಿಸುವಂತಿರಲಿಲ್ಲ. ಹಾಗೆಂದು ಅಷ್ಟಕ್ಕೆ ಆಸೆ ಬಿಟ್ಟುಕೊಡುವವರಲ್ಲ ಕೃಷ್ಣ ಪ್ರಭುಗಳು. ಬುದ್ಧಿ ಬರುವಾಗಲಿಂದಲೇ ತಾನೊಂದು

ಪ್ರೆಸ್ಸಿನ ಮಾಲಕನಾಗಬೇಕೆಂಬುದು ಅವರ ಆಸೆಯಾಗಿತ್ತು. "ವಿಜಯಾ ಪ್ರೆಸ್" ಅವರ ಆಯ್ಕೆಯ ಶೀರ್ಷಿಕೆಯಾಗಿತ್ತು. ಬೇಡಿಕೆ ಪತ್ರವನ್ನು ಹಿಡಿದು ಕಲೆಕ್ಟರ್‌ರವರ ಕಚೇರಿ ತಲುಪಿದರು. ಅಲ್ಲಿ ಅರ್ಜಿ ಕಂಡ ಸ್ಥಳೀಯ ಹಿತೈಷಿಗಳು ಶೀಘ್ರ ಅನುಮತಿಗೆ ವಿಜಯದ ಬದಲು ವಿಕ್ಟೋರಿಯ ಪ್ರೆಸ್ ( ವಿಜಯದ ದೇವತೆ ) ಎಂದು ಬದಲಾಯಿಸುವಂತೆ ಸಲಹೆ ನೀಡಿದರು. ಶೀರ್ಷಿಕೆ ಬದಲಿಸಿದ ಪ್ರಭುಗಳು–ಪ್ರೆಸ್ಸಿನಿಂದ ತನ್ನ ಮೂವರು ಗಂಡು ಮಕ್ಕಳಿಗೆ ಸ್ವೋದ್ಯೋಗ ಕಲ್ಪಿಸಿದಂತಾಗುತ್ತದೆ ಮಾತ್ರವಲ್ಲ, ಅವರು ನಿರುದ್ಯೋಗಿಗಳಾಗಿ ಮುಂದುವರಿದಲ್ಲಿ ಸ್ವಾತಂತ್ರ್ಯ ಹೋರಾಟದ ಚಳವಳಿಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಸಾಧ್ಯತೆ ಇದೆ ಎಂದು ಬಿಳಿಯ ಅಧಿಕಾರಿಗಳಿಗೆ ಮನದಟ್ಟು ಮಾಡಿದರು. ಪ್ರಭುಗಳ ಶೀರ್ಷಿಕೆ ಮತ್ತು ಮಾತಿನ ವರಸೆಗೆ ಸೋತ ಕಲೆಕ್ಟರ್ ತಕ್ಷಣ ಮುದ್ರಣಾಲಯಕ್ಕೆ ಅನುಮತಿ ನೀಡಿದರು ! ಪ್ರಭುಗಳ ಶ್ರಮಕ್ಕೆ ವಿಜಯ ಸಿಕ್ಕಿತು. ಹೆಸರು ವಿಕ್ಟೋರಿಯಾ ಪ್ರೆಸ್ ಎಂದಾಯಿತು! 1950 ರ ತನಕ ಅವರು ಇದರಲ್ಲಿ ದುಡಿದರು.

2010 ರ ವರೆಗೂ ಮೂರನೇ ತಲೆಮಾರಿನ ಶ್ರೀ ಪ್ರಭಾಕರ್ ಪ್ರಭು ರವರು ಅಜ್ಜನ ಆಶಯದಂತೆ ವಿಕ್ಟೋರಿಯಾ ಪ್ರೆಸ್ಸನ್ನು ನಡೆಸಿಕೊಂಡು ಬಂದರು. ಮ್ಹಾಲಕರ ಅನ್ಯ ಆದ್ಯತೆಯ ನಿರ್ಮಾಣಕ್ಕೆ ಸ್ಥಳ ಬಿಟ್ಟುಕೊಡಬೇಕಾಗಿ ಬಂತು. ಇದೀಗ ಪ್ರೆಸ್ ಸಹಜವಾಗಿಯೆ ಮಾಯವಾಯಿತು. ಕೃಷ್ಣ ಪ್ರಭುಗಳು ಅವರ ಮಕ್ಕಳು ನಡೆಸುತ್ತಿರುವ, ಬಂಟ್ವಾಳದಲ್ಲಿ 1952 ರಲ್ಲಿ ಸ್ಥಾಪನೆಗೊಂಡ ದಿವಾಕರ್ ಪ್ರೆಸ್‌ನಲ್ಲೂ ಎರಡು ವರ್ಷ ಮಾರ್ಗದರ್ಶನ ನೀಡಿದ್ದಾರೆ. ಪ್ರಭುಗಳು ಹುಟ್ಟುಹಾಕಿದ ಅಕ್ಷರಸೇವಾ ಪ್ರತೀಕ ಶ್ರೀ ಸರಸ್ವತಿ ಗ್ರಂಥಮಾಲಾದಲ್ಲಿ ಕೊಂಕಣಿ ಹಾಗೂ ಕನ್ನಡದ ಅದೆಷ್ಟೋ ಕೃತಿಗಳು ಬೆಳಕು ಕಂಡಿವೆ.

**ದೇಶಭಕ್ತ ಕೃಷ್ಣ ಪ್ರಭು**

ಪ್ರಭುಗಳ ಏರು ಜವ್ವನದ ಕಾಲ. 'ಸುವಾಸಿನಿ' ಮಾಸಿಕ ಮತ್ತು ಸ್ವದೇಶಾಭಿಮಾನಿ ಸಾಪ್ತಾಹಿಕಗಳಲ್ಲಿ ದೇಶ ಭಕ್ತಿಯ ಕೆಚ್ಚಿನ ಬರಹಗಳು ಪ್ರಕಟಗೊಳ್ಳುತ್ತಿದ್ದ ಸಮಯ. ಪಂಜೆ ಮಂಗೇಶರಾಯರು ರಾಷ್ಟ್ರಾಭಿಮಾನಿ ಕವನಗಳನ್ನು ಬರೆದು ಪ್ರಚುರ ಪಡಿಸುತ್ತಿದ್ದ ದಿನಗಳವು. ಗಾಂಧೀಜಿ 1927 ರ ಅಕ್ಟೋಬರ್‌ನಲ್ಲಿ ಬಂಟ್ವಾಳದಲ್ಲಿ ಮಾಡಿದ, ರಾಷ್ಟ್ರೀಯ ಜಾಗೃತಿ ಮೂಡಿಸಿದ ಭಾಷಣವನ್ನಾಲಿಸಿ ಪ್ರಭುಗಳಲ್ಲಿ ದೇಶ ಭಕ್ತಿಯ ಕಾವು ಬಲವಾಗುತ್ತಿತ್ತು. 1930 ರ ಎಪ್ರಿಲ್ ನಲ್ಲಿ ಜಿಲ್ಲೆಯಲ್ಲಿ ಉಪ್ಪಿನ ಸತ್ಯಾಗ್ರಹದಡಿ ಅನೇಕರು ಬಂಧಿತರಾದರು. ಬಂಟ್ವಾಳದ ದೇಶ ಪ್ರೇಮಿಗಳು ಚಳುವಳಿ ನಿರತರಾದರು. ಆಗ ಕೃಷ್ಣ ಪ್ರಭುಗಳು ಬರೆದು ಕೊಟ್ಟ ಗೀತೆ ಅವರ ಅಮರ ದೇಶ ಭಕ್ತಿಗೆ ಸ್ಪಷ್ಟ ಸಾಕ್ಷಿ.

ಉಪ್ಪು ಬೇಕೆ ಉಪ್ಪು ಪರಿಶುದ್ಧ ಉಪ್ಪು ॥
ತಪ್ಪು ತೆರಿಗೆಗಳ ಒಪ್ಪದಿಹ ಉಪ್ಪು ॥
ಸುಲಿಗೆ ನಿಲಿಸುವ ಉಪ್ಪು । ಸುಂಕವಿಲ್ಲದ ಉಪ್ಪು ॥
ಜಲನಿಧಿಯು ಕರೆದಿತ್ತ । ತಿಳಿನೀರಿನುಪ್ಪು ॥
ಬಿಳಿ ಮುಖಕೆ ಮಸಿ ಕಪ್ಪು ಬಳಸಿ ಭಂಗಿಸಿದುಪ್ಪು ॥
ಛಲದಂಕ ಗಾಂಧಿ ಮಹಾತ್ಮರ ಉಪ್ಪು ॥

ಮಹಾತ್ಮರ ಧೀರ ನಡೆಯನ್ನು ಪ್ರಶಂಸಿಸುತ್ತ, ಯುವ ಜನರಲ್ಲಿ ದೇಶ ಪ್ರೇಮದ ಕಿಡಿಯನ್ನು ಹೊತ್ತಿಸಿದ, ಬಿಳಿಯರ ನಿರಂಕುಶ ಧೋರಣೆಗೆ ಮಸಿಬಳಿದು ಖಂಡಿಸಿದ ಈ ಕವನವನ್ನು ಬಂಟ್ವಾಳದ ಬಂಧುಗಳು ಈಗಲೂ ಗುನುಗುನಿಸುತ್ತಾರೆ.

ಶ್ರೀ ಪ್ರಭು ವಿರಚಿತ ಕೊಂಕಣಿ ಭರತ ಮಾತಾ ಸ್ತುತಿ ಅಪ್ಪಟ ದೇಶ ಭಕ್ತಿಯ ಪ್ರತೀಕ.

ಭರತ ಮಾತಾ ಸ್ತುತಿ

(ಧಾಟಿ – ಭಕ್ತಸುರ ತರುಲತೇ ದೇವಿ ಲಲಿತೆ)
ಜಯ ಜಯ ಮಹಾದೇವಿ ಶ್ರೀ ಭಾರತಿ ॥
ಜಯ ಜಗನ್ಮೋಹಿನಿ । ಜಯ ದಯಾಮಯಿ ಮೂರ್ತಿ ॥ಜಯ ॥ ॥ ಪಲ್ಲ॥
ಪುಣ್ಯಕರತೀರ್ಥ ಧನ । ಧಾನ್ಯ ಗೋಸಸ್ಯ ಘನ ।
ಮಾನ್ಯ ಮಹಾತ್ಮ ಜನ । ಜನ್ಮ ಭೂಮಿ ॥
ಧನ್ಯ ತುಗೆಲಿ ಶಕ್ತಿ । ಭಿನ್ನನಾತ್ತಿಲಿ ಪ್ರೀತಿ ॥
ಪೂರ್ಣ ಪರಹಿತ ಪ್ರೇಮಿ । ಭರತ ಭೂಮಿ ॥ ಜಯ ॥ ॥1॥
ಖಂಡಿತ ವಿಶಾಲ ಭ್ರ । ಹ್ಮಾಂಡಾಂತು ಧನ ಧಾನ್ಯ ।
ಭಂಡಾರ ತೂ ಭರತ । ಖಂಡ – ದೇವಿ॥
ಪಾಂಡಿತ್ಯ ಪ್ರತಿಮಾ ಪ್ರ ಚಂಡ ಸದ್ಧರ್ಮ ಕೋ।
ದಂಡುಧರ್ಲೆಲಿ ಸರ್ವ । ಖಂಡ ಚೂಡಾಮಣಿ ॥ ಜಯ ॥ ॥ 2॥
ವ್ಯಾಸ ವಾಲ್ಮೀಕಿ ಕಾಳಿ । ದಾಸಾನಿಧರ್ಮೋಪ।
ದೇಶು ದಿಲ್ಲೆಲಿ ಶ್ರೇಷ್ಠ । ಪಾಠಶಾಲಾ ॥
ದಾಶರಥಿ – ಕೃಷ್ಣಾದಿ । ಧಾ ಶ್ರೇಷ್ಠ– ದೇವಾಂಕ।
ಭೂಷಣ ವೀಶೇಷ ತೂ– । ನವರತ್ನ ಮಾಲಾ॥ ಜಯ ॥ ॥3॥

ಅಖಿಲ ಬ್ರಹ್ಮಾಂಡದಲ್ಲಿ ಸಕಲ ಧನ ಧಾನ್ಯ ಭಂಡಾರವೆನಿಸಿದ ಭರತ ಖಂಡ ಸರ್ವಖಂಡ ಚೂಡಾಮಣಿ ಎಂದು ಬಣ್ಣಿಸಿದ ಕವಿ ಹೃದಯ ವೈಶಾಲ್ಯ ಶ್ಲಾಘನೀಯ. ಇದೊಂದು ಅಪೂರ್ವ ದೇಶ ಭಕ್ತಿಗೀತೆ.

**ಬಹು ಭಾಷಾ ಸಂಪನ್ನ:** ಅವರಿಗೆ ಸಂಸ್ಕೃತ ಭಾಷೆಯ ಬಗೆಗೆ ಸಹಜ ಒಲವಿತ್ತು. ಎಲ್ಲಾ ಭಾರತೀಯ ಭಾಷೆಗಳಿಗೆ ಸಂಸ್ಕೃತ ಮಾತೃ ಭಾಷೆ ಎನ್ನುತ್ತಿದ್ದರು. ಭಾರತದ ಅನೇಕ ಉಪಭಾಷೆಗಳು ಹತ್ತು ಹಲವು ಕಾರಣಗಳಿಂದ ಸೊರಗಿವೆ. ಆದರೂ ಆ ಉಪಭಾಷೆಗಳಿಗೆಲ್ಲ ಬೇಕಾದ ಶಬ್ದ ಸಹಾಯ ಮಾಡಲು ಮಾತೃ ಭಾಷೆ ಸಂಸ್ಕೃತ ಹಿಂದುಳಿದಿಲ್ಲ ಎನ್ನುತ್ತ ಸಂಸ್ಕೃತದ ಮೂಲಶಕ್ತಿಯ ಬಗ್ಗೆ ಅಭಿಮಾನ ತಾಳುತ್ತಾರೆ.

ದೇಶ ಭಾಷೆಯಾಗಿ ಹಿಂದಿ ಕಲಿತ ಪ್ರಭುಗಳು ತುಳು, ಕನ್ನಡ, ಮರಾಠಿ, ಬಂಗಾಲಿ ಭಾಷೆಗಳನ್ನು ತಿಳಿದಿದ್ದರು, ಅವರ ದೊಡ್ಡಮ್ಮ ಮರಾಠಿ ತಿಳಿದವರಾಗಿದ್ದರು. ಇನ್ನೋರ್ವ ಬಂಧು ಬಂಗಾಲಿ ಪುಸ್ತಕಗಳನ್ನು ತರಿಸುತ್ತಿದ್ದರು. ಇವೆಲ್ಲದರ ಲಾಭ ಪಡೆಯುವಲ್ಲಿ ಪ್ರಭುಗಳ ಭಾಷಾಸಕ್ತಿ ಕೆಲಸ ಮಾಡಿತು. ಶ್ರೀ ವಾಮನ್ ಶ್ರೀನಿವಾಸ್ ಕುಡ್ವರ 'ನವಭಾರತ' ದೈನಿಕಕ್ಕೆ ಬಂಗಾಲಿ ಕಥೆಗಳನ್ನು ಅನುವಾದಿಸಿ ಕಳಿಸುತ್ತಿದ್ದರು. ಅವರ ನಾಟಕ ಸಾಹಿತ್ಯದಲ್ಲಿ ಮರಾಠಿ ಪ್ರಭಾವವನ್ನು ಸ್ಪಷ್ಟವಾಗಿ ಗುರುತಿಸಬಹುದು.

**ಮಾತೃ ಭಾಷಾ ಪ್ರೇಮ**

ಇಂಗ್ಲೀಷ್ ಸಹಿತ 6–7 ಭಾಷೆಗಳ ಮೇಲೆ ಸಾಕಷ್ಟು ಪ್ರಭುತ್ವ ಪಡೆದಿದ್ದ ಪ್ರಭುಗಳು ತನ್ನ ಮನೆಮಾತು ಕೊಂಕಣಿಯನ್ನು ಹೆತ್ತಬ್ಬೆಯಂತೆ ಪ್ರೀತಿಸಿದರು.

ಮಾತೃ ಭಾಷಾ ಅಭಿವೃದ್ಧಿಯಿಂದ ಮಾತ್ರ ಸಮಾಜೋನ್ನತಿ ಸುಲಭ ಸಾಧ್ಯ ಎಂದು ಬಲವಾಗಿ ಪ್ರತಿಪಾದಿಸಿದರು. ವ್ಯವಹಾರ, ಉದ್ಯೋಗ ನಿಮಿತ್ತ ಅನ್ಯ ಭಾಷಿಗರ ನಡುವೆ ಬದುಕಬೇಕಾಗಿ ಬರುತ್ತದೆ. ಆ ಭಾಷೆಯನ್ನು ಕಲಿಯುವ ಧಾವಂತದಲ್ಲಿ ಮಾತೃ ಭಾಷೆಯನ್ನು ಮರೆಯುವುದು ಅಪರಾಧ. ಹಾಗೆ ಭಾಷೆ ನಶಿಸುವುದರಿಂದ ಪರಸ್ಪರ ಮೂಲ ಬಂಧುತ್ವವೂ ತಪ್ಪಿ ಹೋದಂತಾಗಿ, ಒಂದು ಸಂಸ್ಕೃತಿ ವಿನಾಶದಂಚಿಗೆ ತಲುಪಿದಂತಾಗುತ್ತದೆ. ಆದಕಾರಣ ತನ್ನ ಮಾತೃ ಭಾಷೆ ಕೊಂಕಣಿಗೆ ತನ್ನಿಂದಾದ ಸೇವೆ ಸಲ್ಲಿಸುವ ದೃಢ ಧ್ಯೇಯವುಳ್ಳವನಾಗಿದ್ದೇನೆ ಮತ್ತು ಅದು ತನಗೆ ಕರ್ತವ್ಯ ಕೂಡ ಎಂದು ವಿನಮ್ರವಾಗಿ ಹೇಳುತ್ತಾರೆ. ಅದಕ್ಕಾಗಿ ಕೊಂಕಣಿಯಲ್ಲಿ ಗೀತನಾಟಕಗಳನ್ನು ರಚಿಸಿ, ಪ್ರಚುರ ಪಡಿಸಿ, ರಂಗದಲ್ಲಿ ಯಶಸ್ವಿಯಾಗಿ ಪ್ರದರ್ಶಿಸಿದ ಸಾಧಕರು ಶ್ರೀ ಪ್ರಭುಗಳು. ಭಾಷೆಯ ಬಗ್ಗೆ ಕೀಳರಿಮೆ ಸಲ್ಲದು; ಅದರ ಅಭಿವೃದ್ಧಿಗಾಗಿ ಸಾಧನೆ ಮಾಡಿದರೆ ಯಶಸ್ಸು ಖಂಡಿತ. ವೀಣೆಯ ಸಾಧಕನಿಂದಲೂ ಆರಂಭದಲ್ಲಿ ಬರುವುದು ಅಪಸ್ವರವೆ. ಅದು ಕರ್ಕಶವೆಂದು ಬಿಡದೆ; ಸಹನೆಯಿಂದ ನಿರಂತರ

ಅಬ್ಯಾಸ ಮಾಡಿದಾಗ ಮಾತ್ರ ಸರ್ವರಿಗೂ ಆಪ್ಯಾಯಮಾನವಾದ ಸುಮಧುರ ಸುಸ್ವರ ಹೊರಡುವುದು ಸಾಧ್ಯ ಎಂದು ಭಾಷಾಭಿವೃದ್ಧಿ ಸಾಧಕರಿಗೆ ದೃಷ್ಟಾಂತ ಮೂಲಕ ಪ್ರೋತ್ಸಾಹಿಸುತ್ತಾರೆ. ಶ್ರೀ ಸರಸ್ವತಿ ಗ್ರಂಥಮಾಲಾ ಸ್ಥಾಪನೆಯ ಮೂಲಕ ತಾನು ನಂಬಿದ ಮಾತೃಭಾಷಾಭಿವೃದ್ಧಿಯ ಕೈಂಕರ್ಯದಲ್ಲಿ ಕೃತಾರ್ಥರೆನಿಸಿದ್ದಾರೆ.

ವಿದ್ಯಾ ಸಂಸ್ಥೆಗಳು, ಪಂಡಿತ ಕವಿಗಳು, ಸರಕಾರ ಭಾಷಾಭಿವೃದ್ಧಿಗೆ ದುಡಿಯಲಿ; ತಾನೋರ್ವ ಸಾಮಾನ್ಯ, ತನ್ನಿಂದೇನಾಗದು ಎಂಬ ಧೋರಣೆ ಸರಿಯಲ್ಲ, ಪ್ರತಿಯೊಬ್ಬರೂ ಮಾತೃಭಾಷಾ ಉಳಿವಿಗಾಗಿ ತಮ್ಮ ಪಾಲಿನ ಅಳಿಲ ಸೇವೆ ಸಲ್ಲಿಸಿದಾಗಲೇ ತಾನು ಹುಟ್ಟಿ ಬೆಳೆದ ಸಮಾಜದ ಋಣವನ್ನು ಸ್ವಲ್ಪವಾದರೂ ತೀರಿಸಿದಂತಾಗುತ್ತದೆ ಎಂದು ಬಲವಾಗಿ ಪ್ರತಿಪಾದಿಸಿದರು.

ಅನ್ಯರಿಂಗುಪದೇಶಗೊಡುವ ಬಗೆಯನ್ನು ।
ನಿನ್ನ ನಡತೆಯೊಳಿರಿಸಿ ತೋರಿಸೈ ನೀನು॥
ಆಡಿ ಬೋಧಿಸುವ ನುಡಿಗಿಂತ ಮೈದೋರಿ ।
ಮಾಡಿ ತೋರಿಸುವುದು ಶೀಘ್ರ ಫಲಕಾರಿ ॥

ಎಂದು ನುಡಿದು, ನುಡಿದಂತೆ ನಡೆದರು. ಮಾತೃಭಾಷಾ ಕೈಂಕರ್ಯಕ್ಕಾಗಿ ಟೊಂಕ ಕಟ್ಟಿದರು.

**ಶಿಕ್ಷಣ ಪ್ರೇಮಿ:–** ಸುಶಿಕ್ಷಿತ ನಾಗರಿಕ ಸಮಾಜ ದೇಶದ ಬಹುದೊಡ್ಡ ಆಸ್ತಿ ಎಂದು ಮನಗಂಡವರು ಬೋಳಂತೂರು.

ವಿದ್ಯೆಯೇ ಇಷ್ಟಾರ್ಥ ಸಿದ್ಧಿ ಪ್ರದಾತೆ ।
ವಿದ್ಯೆಯೇ ದುಃಖ ಹಾರಿಣಿ ಜಗನ್ಮಾತೆ ॥
ವಿದ್ಯೆಯೊಂದಿದ್ದವನ ಸುದ್ದಿ ಸವಿ ಜೆಲ್ಲ ।
ವಿದ್ಯೆಯಿಲ್ಲದ ಮನುಜನಿದ್ದು ತಾನಿಲ್ಲ ॥

(ಸುಬೋಧ ಶತಕ)

ಪ್ರತಿಯೊಬ್ಬರು ತಮ್ಮ ತಮ್ಮ ದುಡಿಮೆಯ ಫಲದಲ್ಲಿ ಸ್ವಲ್ಪವಾದರೂ ಶಿಕ್ಷಣಕ್ಕಾಗಿ ವ್ಯಯಿಸಬೇಕು. ಅದುವೇ ಶ್ರೇಷ್ಠ ದಾನ ಎಂದು ನಂಬಿ, ಅದರಂತೆ ನಡೆದರು. ಬಂಟ್ವಾಳದಲ್ಲಿ ತಮ್ಮ ನಿರ್ದೇಶನದ ನಾಟಕ ಪ್ರದರ್ಶನಗಳಲ್ಲಿ ಖರ್ಚು ಕಳೆದು

ಉಳಿದ ಮೊತ್ತವೆಲ್ಲವನ್ನೂ ಸ್ಥಳೀಯ ಶಾಲೆಗೆ ಕೊಡುಗೆಯಾಗಿ ನೀಡುತ್ತಿದ್ದರು.

1934ರ ಜನವರಿ 1 ರಂದು ಬಂಟ್ವಾಳದ ಹೊಸಪೇಟೆಯಲ್ಲಿ ಪ್ರದರ್ಶನಗೊಂಡ ಕವಿಜಯದೇವ ನಾಟಕದ ಕರಪತ್ರದಲ್ಲಿ ಅವರು ಪ್ರಚುರಪಡಿಸಿದ ಕೆಲವು ಸಾಲುಗಳನ್ನು ದೃಷ್ಟಾಂತಕ್ಕಾಗಿ ಯಥಾವತ್ ಬರೆದಿದ್ದೇನೆ.

ಕವಿಜಯದೇವ ನಾಟಕವನ್ನು ಆಡಿ ತೋರಿಸುವರು

ಪ್ರೋತ್ಸಾಹಿಸಿರಿ! ಪುಣ್ಯಗಳಿಸಿಕೊಳ್ಳಿರಿ!!

ಈ ನಾಟಕದಿಂದ ಉತ್ಪತ್ತಿಯಾಗುವ ಹಣವು ಶ್ರೀ ವೆಂಕಟರಮಣ ದೇವರ ಹೈಸ್ಕೂಲಿನ ಸೇವಾರ್ಥವಾಗಿ ವಿನಿಯೋಗಿಸಲ್ಪಡುವುದು.

ಈ ನಾಟಕಕ್ಕೆ ಕೊಡುವ ನಿಮ್ಮ ಹಣವು ವ್ಯರ್ಥವಾಗಿ ಹೋಗುವುದೆಂದು ತಿಳಿಯದಿರಿ. ನಿಮ್ಮ ನಿಮ್ಮ ಬಾಲಕ ಬಾಲಿಕೆಯರ ವಿದ್ಯಾರ್ಜನೆಗಾಗಿಯೇ ವಿನಿಯೋಗಿಸಲ್ಪಡುವುದು.

ಅದು ಕಾರಣ ಆಬಾಲವೃದ್ಧರು ಅಗತ್ಯವಾಗಿ ನೋಡಲೇಬೇಕು!

ಬನ್ನಿರಿ! ನಿಮ್ಮ ಶಕ್ತಿಗನುಸಾರವಾಗಿ ಪ್ರೋತ್ಸಾಹಿಸಿರಿ! ನೋಡಿರಿ! ಆನಂದಿಸಿರಿ!! ಈ ಸುಸಂದರ್ಭವನ್ನು ಸುಮ್ಮನೆ ಕಳಕೊಳ್ಳಬೇಡಿರಿ!!!

ಪ್ರಭುಗಳ ಹೃದಯ ಶ್ರೀಮಂತಿಕೆಗೆ ನೂರು ನಮನಗಳು.

ಬಂಟವಾಳ ಶ್ರೀ ವೆಂಕಟರಮಣ ಪ್ರೌಢಶಾಲೆಯಲ್ಲಿ ಇಂದಿಗೂ ಪ್ರಭು ವಿರಚಿತ ಕವನವೇ ಶಾಲಾ ಪ್ರಾರ್ಥನೆ.

ಶ್ರೀಶ ವಟಪುರೇಶ ವೆಂಕಟೇಶ ವಂದನಾ
ಜಯ ಜಯ॥

ವಿಶ್ವ ಪಾಲಕಾ ಜಯತು ವಿಶ್ವನಾಯಕ
ವಿಶ್ವ ಸಕಲ ಹರ್ಷ ಕರಿಸು ವಿಶ್ವಲೋಚನಾ
ಜಯ ಜಯ॥

ಶೇಷ ಶಯನನೇ ವೆಂಕಟೇಶ ಎಮ್ಮನೇ
ಲೇಶನ್ನಿತ್ತು ಪೋಷಿಸೈ ವಾಸುದೇವನೇ
ಜಯ ಜಯ

**ಜ್ಯೋತಿಷ್ಯ ಜ್ಞಾನ**

ವೇದಾಧ್ಯಯನದ ಜೊತೆಗೆ ಜ್ಯೋತಿಷ್ಯ ಶಾಸ್ತ್ರವನ್ನೂ ಅಧ್ಯಯನ ಮಾಡಿದ ಪ್ರಭುಗಳು 'ಸುಲಭ ಜಾತಕ' 'ಸ್ಫುಟ ಜಾತಕ' ಕುರಿತು ಬಿಡಿ ಲೇಖನಗಳನ್ನು ಬರೆಯುತ್ತಿದ್ದರು. ಜಾತಕದ ಗುಣದೋಷಗಳನ್ನು ಹೇಳುವುದು, ಲಗ್ನಕ್ಕೆ ಬೇಕಾಗಿ 'ಮೇಳಾಮೇಳಿ' ನೋಡುವುದು ಪ್ರಭುಗಳಿಗೆ ಬಿಡುವಿನ ವೇಳೆಯ ಹವ್ಯಾಸವಾಗಿತ್ತು.

ಇವರ ಎಲ್ಲಾ ರೀತಿಯ ಅಧ್ಯಯನ, ಬರವಣಿಗೆಗಳಿಗೆ ಆಪ್ತಮಿತ್ರ ಬಂಟ್ವಾಳ ರಾಮ ಬಾಳಿಗಾರ ಪ್ರೋತ್ಸಾಹ, ಪ್ರೇರಣೆಯೇ ಕಾರಣ. ಬಾಳಿಗರು ಸಹ ಜ್ಯೋತಿಷ್ಯ ಅಭ್ಯಾಸ ಮಾಡಿದವರು. ಗೆಳೆಯ ಪ್ರಭುವನ್ನು ಪರೀಕ್ಷಿಸಲೋ ಎಂಬಂತೆ ಒಮ್ಮೆ ಒಂದು ಜಾತಕವನ್ನು ಬಾಳಿಗರು ತಂದುಕೊಟ್ಟರು. ಕೂಲಂಕಷ ಪರಿಶೀಲಿಸಿದ ಪ್ರಭುಗಳು "ಈ ಜಾತಕಕ್ಕೆ ಮೂಕಯೋಗ ಇದೆ, ಮೈ ತುಂಬಾ ಅಸಹಜ ರೋಮಗಳಿರಬಹುದು" ಎಂದರಂತೆ.

ಬಾಳಿಗರು "ಶಹಭಾಸ್ ಕೃಷ್ಣ" ಎಂದರು. ಅವರು ತಂದ ಜಾತಕ ದನದ ಕರುವಿನದು!

**ಸಾಹಿತ್ಯ ದಿಗ್ಗಜರ ಭೇಟಿ**

ಮಂಗಳೂರು ಸಮಾಚಾರ, ನವಭಾರತ, ಹಾಗೂ ಒಂದಾಣೆ ಮಾಲೆ ಮೂಲಕ ಕರಾವಳಿ ಕರ್ನಾಟಕದಲ್ಲಿ ಆಗಲೇ ಮನೆಮಾತಾಗಿದ್ದರು ಪ್ರಭುಗಳು. ಕೇರಳದ ಕೆಲವೆಡೆ ಚಂದ್ರಹಾಸ ನಾಟಕವೂ ಪ್ರದರ್ಶನಗೊಂಡಿತ್ತು. ಫಲವಾಗಿ ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈಗಳು ಪ್ರಭುಗಳ ಭೇಟಿಗೆಂದು ಬಂಟ್ವಾಳಕ್ಕೆ ಬಂದರು. ಪ್ರೆಸ್ಸಿನಲ್ಲಿ ಉಭಯಕುಶಲೋಪರಿ ನಡೆಸಿ, ಮನೆಗೆ ಬಂದ ಪೈಗಳೊಂದಿಗೆ ಪ್ರಭುಗಳ ಸಾಹಿತ್ಯ ಜಿಜ್ಞಾಸೆ, ಪರಸ್ಪರ ಕೃತಿ ವಿಮರ್ಶೆ ವಸ್ತುನಿಷ್ಠವೂ, ಸ್ವಾರಸ್ಯವೂ ಆಗಿತ್ತು ಎಂದು ಪುತ್ರರಾದ ಶ್ರೀ ವಸಂತ ಮಾಧವ ಪ್ರಭು ಮತ್ತು ಶ್ರೀ ವಿಶ್ವನಾಥ ಪ್ರಭು ತಮ್ಮ ನೆನಪುಗಳನ್ನು ಮೆಲುಕು ಹಾಕುತ್ತಾರೆ. ಅವರಲ್ಲಿ ಪತ್ರವ್ಯವಹಾರವಿತ್ತೆಂದೂ, ಅಮೂಲ್ಯ ಸಂಗ್ರಹಯೋಗ್ಯ ಪತ್ರಬರವಣಿಗೆಗಳೆಲ್ಲವೂ 1974ರ 'ಬಂಟ್ವಾಳ ಪ್ರವಾಹದಲ್ಲಿ' ನಾಶವಾಯಿತೆಂದು ವಿಷಾದಿಸುತ್ತಾರೆ ಪುತ್ರರು.

ಮಾನ್ಯ ಗೋವಿಂದ ಪೈಗಳು ಸುಬೋಧ ಶತಕದ ಕುರಿತು ಹೀಗೆ ಬರೆದಿದ್ದಾರೆ– "ಈ ಕೃತಿಯಲ್ಲಿಯ ದ್ವಿಪದಿಗಳು ಸೊಗಸಾಗಿವೆ. ಇವುಗಳಲ್ಲಿಯ ಸುಬೋಧವು ಚಿಕ್ಕವರ ತಿಳಿವಿಗೆ ಎಷ್ಟು ಸುಲಭವಾಗಿದೆಯೋ ಅವರ ಬುದ್ಧಿಯ ಬೆಳವಿಗೆ ಅಷ್ಟೇ ಉಪಕಾರಿಯಾಗಿದೆ. ಮುದ್ರಣವನ್ನು ಕುರಿತು ಯಾವೊಂದೂ

ಆಕ್ಷೇಪವನ್ನೂ ಎತ್ತುವಂತಿಲ್ಲ. ಶೈಲಿ ಲಘುವಾಗಿ ಅರ್ಥವು ಸವಿಯಾಗಿರುವ ರಚನೆಯನ್ನು ಯಾರು ತಾನೆ ಅಭಿನಂದಿಸರು? ಇಂತಹ ಗದ್ಯ-ಪದ್ಯ ಕೃತಿಗಳನ್ನು ತಾವು ರಚಿಸಿ ಕನ್ನಡ ಸಾಹಿತ್ಯವನ್ನು ಹಿಗ್ಗಿಸುವಂತೆ ಪರಮಾತ್ಮನು ಅನುಗ್ರಹಿಸಲೆಂದು ನನ್ನ ಹಾರೈಕೆ."- ಮಂಜೇಶ್ವರ ಗೋವಿಂದ ಪೈ.

1953ರ ಜನವರಿಯಲ್ಲಿ ಹರಿಕಥಾ ದಿಗ್ಗಜರಾದ ಭದ್ರಗಿರಿ ಶ್ರೀ ಅಚ್ಚುತದಾಸ ಮತ್ತು ಶ್ರೀ ಕೇಶವದಾಸ ರವರು ಪ್ರಭುಗಳ ಮನೆಗೆ ಬಂದಿದ್ದರಂತೆ. ಆಗಿನ್ನೂ ಕಥಾಪ್ರವಚನದ ಆರಂಭಕಾಲ ಭದ್ರಗಿರಿಯವರಿಗೆ. ತಮ್ಮ ಹರಿಕಥೆಗೆ ಪೂರಕವಾದ ವಿವಿಧ ಸಾಂದರ್ಭಿಕ ಗೀತರಚನೆಯ ಕುರಿತು ಸಾಗಿತ್ತು ಅವರ ಸಂಭಾಷಣೆ ಎಂದು ನೆನಪಿಸುತ್ತಾರೆ ಮಕ್ಕಳು.

ಬಂಟ್ವಾಳ ದೇವಾಲಯದಲ್ಲಿ ಹರಿಕಥೆಗೆಂದು ಬರುತ್ತಿದ್ದ ಶ್ರೀ ಪಾವಂಜೆ ಹರಿದಾಸ ಭಟ್ಟರು ಪ್ರಭುಗಳೊಂದಿಗೆ ತಾಸುದ್ದ ಹರಟೆ ಹೊಡೆಯುತ್ತಿದ್ದರಂತೆ. ಹರಟೆಯ ಸಾರ ಸನಾತನ ಸಂಸ್ಕೃತಿಯ ಕುರಿತಾಗಿತ್ತಂತೆ.

ಚಲನಚಿತ್ರ ನಿರ್ದೇಶಕ ಶ್ರೀ ಸುಬ್ಬಯ್ಯ ನಾಯ್ಡು ಬಂಟ್ವಾಳದ ಮನೆಯಲ್ಲಿ ಕೃಷ್ಣ ಪ್ರಭುಗಳನ್ನು ಭೇಟಿಯಾಗಿದ್ದರಂತೆ. ಸಾಹಿತ್ಯ ಮತ್ತು ರಂಗಭೂಮಿಗೆ ಸಂಬಂಧಿಸಿದ ಅದೆಷ್ಟೋ ಮಂದಿ ನಾಮಾಂಕಿತರು ಆಗೊಮ್ಮೆ ಈಗೊಮ್ಮೆ ಬರುತ್ತಲೇ ಇರುತ್ತಿದ್ದರು. ಹಿರಿಯರು ಕಿರಿಯರು ಎಂಬ ಭೇದವಿಲ್ಲದೆ ಎಲ್ಲರನ್ನೂ ಪ್ರೀತ್ಯಾದರ ಪೂರ್ವಕ ಬರಮಾಡಿಕೊಳ್ಳುತ್ತಿದ್ದರು ಕೃಷ್ಣ ಪ್ರಭುಗಳು.

ಕರ್ನಾಟಕ ಕೊಂಕಣಿ ಅಕಾಡೆಮಿಯ ಮಾಜಿ ಅಧ್ಯಕ್ಷರಾದ ಮೊ। ಅಲೆಕ್ಸಾಂಡರ್ ಡಿ'ಸೋಜರವರು ಒಮ್ಮೆ ಗೋವಾ ಮೂಲದ ಸಂಶೋಧಕ ಹಾಗೂ ಕೊಂಕಣಿ ಬರಹಗಾರ ಮಾನ್ಯ ಜೋಸ್ ಪಿರೇರಾರವರನ್ನು ಪ್ರಭುಗಳ ಭೇಟಿಗೆಂದು ಮನೆಗೆ ಕರೆದೊಯ್ದರು. ಪ್ರಭುಗಳು ವಯೋ ಸಹಜ ಅನಾರೋಗ್ಯದಿಂದ ಬಳಲಿದ್ದರು. ಆದರೆ ಲಂಡನ್ನಿನ ಓರಿಯಂಟಲ್ ಲೈಬ್ರೇರಿಯಲ್ಲಿ ಪ್ರಭುಗಳ ಕೃತಿಗಳನ್ನು ತಾನು ಕಂಡು, ಕೃತಿಕಾರರನ್ನು ಕಾಣಲು ಬಂದೆ ಎಂದಾಗ ಅವರು ಸಾರ್ಥಕ್ಯದ ಭಾವದಿಂದ ಬಳಲಿಕೆ ಮರೆತು ಎದ್ದು ಕುಳಿತರಂತೆ. ಮತ್ತೆ ಸಾಹಿತ್ಯದ ಸಂಭಾಷಣೆಯಲ್ಲಿ ದಣಿವರಿಯದೆ ಬಹು ಹೊತ್ತು ನಿರತರಾಗಿದ್ದರಂತೆ. ಸಾಹಿತ್ಯ ಅವರಿಗೆ ಶಕ್ತಿ ನೀಡುವ ಟಾನಿಕ್ ಆಗಿತ್ತು.

ಮಂಗಳೂರು ಸೈಂಟ್ ಅಲೋಶಿಯಸ್ ಕಾಲೇಜಿನ ಕನ್ನಡ ಪಂಡಿತರಾದ ವಿದ್ವಾನ್ ಮುಳಿಯ ತಿಮ್ಮಪ್ಪಯ್ಯನವರಲ್ಲಿ ಪ್ರಭುಗಳಿಗೆ ಅಪಾರ ಗೌರವವಿತ್ತು. ಸುಬೋಧ ಶತಕವನ್ನು ಪ್ರೀತಿ ಪುರಸ್ಸರ ಪರಿಶೋಧಿಸಿ ಮುನ್ನುಡಿಯಲ್ಲಿ ಶ್ರೀ ಮುಳಿಯರು ಹೀಗೆ ಬರೆದಿದ್ದಾರೆ–

"ಪ್ರಕೃತ "ಸಣ್ಣವರ ಸುಬೋಧ ಶತಕ" ಎಂಬ ಪದ್ಯ ಕೃತಿಯೊಂದನ್ನು ಬರೆದು ಮಿತ್ರರಾದ ಶ್ರೀ ಬೋಳಂತೂರು ಕೃಷ್ಣ ಪ್ರಭುಗಳವರು ಕನ್ನಡಿಗರ ಅಡಿಗೆ ಒಪ್ಪಿಸಿರುತ್ತಾರೆ. ಹಲವು ಆಧುನಿಕ ಕವಿಗಳ ಕಾವ್ಯ ಫಲಗಳಂತೆ ಇದು ಭಾವನಾ ತರಂಗದಲ್ಲಿ ತೇಲಾಡುವುದಿಲ್ಲ. ಅಂಥ ಸೆಳೆತದ ಹರಿವುಳ್ಳ ಹೊಳೆಯಲ್ಲಿ ಇದು ಬೀಳಲೂ ಇಲ್ಲ. ಬಿದ್ದರೆ ಅವರೆಣಿಕೆಯಂತೆ ಚಿಕ್ಕ ಮಕ್ಕಳು ಹಾರಿ ಈಜಾಡಿ ಆ ಹಣ್ಣನ್ನು ಹಿಡಿಯಲಿಕ್ಕೆ ಸಾಧ್ಯವೂ ಇಲ್ಲ. ಆ ಸಣ್ಣವರ ಎದೆಯುದ್ದದ ನೀರುಳ್ಳ ಕೊಳದಲ್ಲಿ ಬಿದ್ದು ಮುಳುಗಿ ಮೂಡುತ್ತಿರುವ ಹಣ್ಣುಗಳಂತಿವೆ ಈ ಸುಬೋಧ ಪದ್ಯಗಳು. ಈ ಹಣ್ಣುಗಳನ್ನು ಕೈವಶ ಮಾಡಿಕೊಳ್ಳುವಾಗ ಆ ಹುಡುಗರ ಮನಶ್ಶರೀರಕ್ಕೆ ತಕ್ಕ ವ್ಯಾಯಾಮವೂ ಮುಂದಿನ ಘನ ಕಾವ್ಯಗಳಲ್ಲಿ ರುಚಿದೋರುವ ಆರೋಗ್ಯವೂ ಒದಗುತ್ತಾ ಬರುವುದೆಂದು ನಂಬಿರುತ್ತೇನೆ.

ಆದುದರಿಂದ ಕನ್ನಡಿಗರಿದಕ್ಕೆ ತಕ್ಕ ಆಶ್ರಯವನ್ನೀಯಲಿ; ಬಾಲಕರಿಗೆ ಇದರ ಪ್ರಯೋಜನವಾಗಲಿ; ಶ್ರೀ ಪ್ರಭುಗಳು ಇನ್ನೂ ಇಂಥ, ಇದಕ್ಕಿಂತ ಮೇಲಾದಂಥ ಕೃತಿಗಳನ್ನು ಬರೆದು ಪ್ರಕಾಶಿಸುತ್ತಾ ಬರಲಿ. ಇದೇ ನನ್ನ ಪ್ರಾರ್ಥನೆ"– ಮುಳಿಯ ತಿಮ್ಮಪ್ಪಯ್ಯ.

**ಗುರು ಭಕ್ತಿ ದೈವ ಪ್ರೀತಿ**

ದೇವರು ಹಾಗೂ ಹಿರಿಯರ ಬಗ್ಗೆ ಕೃಷ್ಣ ಪ್ರಭುಗಳಿಗೆ ಅನನ್ಯ ಭಕ್ತಿ, ಶ್ರದ್ಧೆ. ಗೌಡ ಸಾರಸ್ವತ ಸಮಾಜದ ಅಂದಿನ ಗುರುವರ್ಯರು ಶ್ರೀ ಶ್ರೀ ಸುಕೃತೀಂದ್ರ ಶ್ರೀಪಾದರ ಕುರಿತು ಅಪಾರ ಆದರಾಭಿಮಾನ ಹೊಂದಿದ್ದ ಪ್ರಭುಗಳು ಅವರ ಬಗ್ಗೆ ಬರೆದ ಕೆಲವು ಕವಿತಾ ಸಾಲುಗಳು ಇಂತಿವೆ.

ಶ್ರೀ ಗೌಡಸಾರಸ್ವತಾಖ್ಯ ಬ್ರಾಹ್ಮಣ ವರ ಪ್ರ।
ಜಾಗಣದ ಗುರುವರ್ಯ ವ್ಯಾಸ ರಘುಪತಿ ಭಜಕ।
ರಾಗಭೋಗಾದಿ ಷಡ್ವೈರಿಗಳ ಗೆಲಿದ ಶ್ರೀ ಕಾಶೀ ಮಠೇಶರೆನಿಸಿಪ
ಯೋಗೀಂದ್ರ, ಭುವನೇಂದ್ರ ಕರಕಮಲ ಜಾತ ನಿಗ
ಮಾಗಮವಿದಿತ ಕೀರ್ತಿ ಸುಶರೀರ ಸರ್ವಾನು

ರಾಗಮಯ ಸದ್ಹೃದಯ ಸುಜ್ಞಾನ ನಿಧಿಜಯ ಸುಗುಣ ಸಾಂದ್ರ
ವರದೇಂದ್ರರ ॥೧॥

ಸದುಪಜೇಷ್ಠಿತ ಶಿಷ್ಯ ಸದಮಲ ಚರಿತ್ರ ಸದ್।
ಹೃದಯ ವೈರಾಗ್ಯ ಪ್ರಸ್ಫುಟಿತ ತೇಜೋಪುಂಜ।
ವದನ ಸುಕೃತಿಸದನ ಶ್ರೀ ಸುಕೃತೀಂದ್ರ ಗುರುವರ್ಯರಡಿ
ದಾವರೆಗಳಂ॥ ಹೃದಯಾಂತರಾಳದಿ ಭಕ್ತಿ ದೀವಿಗೆ ಬೆಳಗಿ।
ಹದಿನೆರಡು ಚರಣ ಕವಿತಾ ಸುಮನ ಫಲಗಳಿಂ।
ಮುದವಾಂತು ಪೂಜಿಸುವೆ ಶ್ರೀ ವೆಂಕಟೇಶ್ವರನ
ಪುಣ್ಯ ಪ್ರೇರಣೆಯಿಂದಲಿ ॥೨॥

ಪುಣ್ಯಾ ಚರಣ ದರ್ಶನ ಗ್ದೆಯ್ಯಾತಿ
ಆನಂದಾನಿ ಸರ್ವೈ.............
ಪುಣ್ಯಾ ಚರಣ ದರ್ಶನ ಗ್ದೆಯ್ಯಾತಿ ............
ಎಂದು ಶ್ರೀ ಸುಕೃತೀಂದ್ರರ ಬಗ್ಗೆ ಬರೆದ ಕೊಂಕಣಿ ಕೀರ್ತನೆ ಈಗ ಲಭ್ಯವಿಲ್ಲ.

ಶ್ರೀ ಮಹಾದೇವನನು ಭಕ್ತಿಯಿಂ ಭಜಿಸು।
ಪ್ರೇಮದಿಂ ಗುರುಗಳಿಗೆ ಶಿರಬಾಗಿ ನಮಿಸು॥
ತಂದೆ ತಾಯ್ಗಳೊಳಿರಿಸು ಶುದ್ಧ ಭಕ್ತಿಯನು ।
ಮುಂದಕದರಿಂದ ಲೇಸುಂಟು ಕೇಳಿನ್ನು ॥

ಹೀಗೆಂದು ಸುಬೋಧ ಶತಕದಲ್ಲಿ ಕಿರಿಯರಿಗೆ ಉಪದೇಶ ನೀಡಿದ್ದಾರೆ. ಅವರನ್ನು ಹತ್ತಿರದಿಂದ ಬಲ್ಲ ಯಾರಿಗೇ ಆದರೂ ಶ್ರೀ ಪ್ರಭುಗಳು ಮೇಲಿನ ಪ್ರತಿಯೊಂದು ಮಾತಿಗೂ ಸಾಕ್ಷಿಯಾಗಿ ಬಾಳಿದವರು ಎಂದೆನಿಸದಿರದು, ಆಚರಣೆಯಲ್ಲಿ ಇಲ್ಲದ ಉಪದೇಶ ವ್ಯರ್ಥ ಪ್ರಲಾಪ ಎಂದು ನಂಬಿದವರು ಅವರು.

ಶೈಶವದಿಂದ ಜೀವಿತದ ಕೊನೆಯವರೆಗೂ ಬಂಟ್ವಾಳ ಶ್ರೀ ತಿರುಮಲ ವೆಂಕಟರಮಣ ಸ್ವಾಮಿಯ ದಿವ್ಯ ಸಾನ್ನಿಧ್ಯದಲ್ಲೇ ಬಾಳನ್ನು ಸವಿದ ಕೃಷ್ಣ ಪ್ರಭುಗಳಿಗೆ ವೆಂಕಟರಮಣನೇ ಜೀವನದ ಸಾರಸರ್ವಸ್ವ

**ಕೀರ್ತನೆ:**

ನೋಡು ಶ್ರೀ ವೆಂಕಟೇಶ್ವರನು ।ದಯ। ಮಾಡಿದ ನವ ಭವನವನು ॥ ರೂಢಿಯೊಳಿದು ಶ್ರೀ ವೈಕುಂಠ ।ವೆಂದು। ಆಡುವ ನುಡಿ ನಿಷ್ಕಪಟ ॥ ಪಲ್ಲ॥ ನೋಡಲೆನು ತೋ ।ಡೋಡಿ ಬರುತಿಹ। ಪ್ರೌಢ ಭಜಕರಿಗಮಿತ ಸುಖವನು॥ ನೀಡುವೀ

ವೃಕ್ಷದ್ವಯಂಗಳ। ನೋಡು ರಕ್ತೇಶ್ವರಿಯ ಭಕ್ತಿಯ ॥ ನೋಡು॥೧॥ ಮೂರಾನೆ ಹೆಬ್ಬಾಗಿಲುಗಳ ।ಮೇಲೆ। ಮೂರುಪ್ಪರಿಗೆ ಗೋಪುರಗಳ॥ ತೋರುವುದೆಡದೊಳುಗ್ರಾಣ ।ಜೋಡು। ದ್ವಾರಗಳಿಹ ದಿವ್ಯ ಭವನ ॥ ಧಾರುಣೀ ಸುರವಾದ ಭಜಕರ । ಭೂರಿ ಭೋಜನ ಶಾಲೆ ಮುಂದಕೆ । ತೋರುವುದೆ ಸುರ ನರರಿಗತಿಸುಖ। ಕಾರಿಯಾಗಿಹ ಯಜ್ಞಮಂಟಪ ॥ ನೋಡು ॥೨॥ ಶಾಂತ ವಸಂತ ಮಾಧವನು । ಮುದ । ವಾಂತು ಮಂಡಿಸುವ ಸ್ಥಾನವನು ॥ ಸಂತಸ ವೀವವುಯ್ಯಾಲೆ । ಹೇಮ । ಕಾಂತಿಯ ವಾಹನ ಶಾಲೆ ॥ ಪಂಥದೊಳು ಭೂ। ಕಾಂತರುಪಟಲ । ಶಾಂತಿ ಗೈದಿಹ ಭಾರ್ಗವನುನೆಲೆ । ಯಾಂತ ಶ್ರೀ ಕುಲದೇವ ಸನ್ನಿಧಿ । ಯಿಂತು ಚಾಲಕರಾಲಯವಮಿಗೆ ॥ ನೋಡು ॥೩॥ ಹಿಂದಣ ಗೋಪುರ ದ್ವಾರ । ದಿಂದ । ಮುಂದಕರ್ಚಕರಗ್ರಾಹಾರ । ಬಂದು ನೇತ್ರಾವತಿ ನೀರ । ನೈದೆ । ಮಿಂದವರಘ ಪರಿಹಾರ ॥ ಅಂದದಾ ಧ್ವಜ ವೀಕ್ಷಿಸುತ ಸಾ । ನಂದದೊಳು ನವರಂಗ ಕೈದಲು । ಮುಂದಿನಾ ವೈಭವವ ನೊರೆಯಲು । ಮಂದಮತಿ ಯನ ಗೊಂದು ನಾಲಿಗೆ ॥ ನೋಡು॥ ದಾನವಾಂತಕ ನಾಪ್ತ ಭಜಕ । ಮುಖ್ಯ ಪ್ರಾಣನಿವನು ಸತ್ವ ಪ್ರಮುಖ ॥ ದೀನಜನರ ಸುರಧೇನು । ಶ್ರೀಗ । ಜಾನನ ದೇವನಿಲ್ಲಿಹನು ॥ ನೀನದೋರ್ವನೆ ದಣಿಯಲೇತಕೆ । ದೀನ । ಭಜಕರು ಬೇಡಿದಾ ವರ । ದಾನಗಳ ತಾ ನೀವೆನೆನುತೀ । ಸ್ಥಾನದೊಳು ನೆಲೆಸಿಹಳು ಶ್ರೀರಮೆ ॥ ನೋಡು ॥೫॥ ಖಗರಾಜ ನೀತ ಪ್ರಖ್ಯಾತ । ಮೂ । ಜಗದಧಿಪತಿಯ ವರೂಥ ಜಗಚಕ್ಷು ರವಿಯು ಮಂದಿರದ ।ದೀಪ್ತಿ । ಬಗೆದು ಲಜ್ಜಿತನು ತಾನಾದ ॥ಝುಗಿ ಝುಗಿಪ ದ್ವಾರವನು ರಕ್ಷಿಪ । ಸುಗುಣಿ ಜಯ ವಿಜಯಾಂಕರೀರ್ವರು । ಪೊಗಳ ಲಳವೇ ವೆಂಕಟೇಶನ । ಅಗಣಿತದ ಮಹಿಮಾತಿಶಯವನು ॥ ನೋಡು॥೬॥ ಮಣಿವೆ ಶ್ರೀ ವೆಂಕಟರಮಣಾ ।ಅರೆ। ಕ್ಷಣವು ನಾ ಬಿಡೆ ನಿನ್ನ ಚರಣಾ ॥ ಅಣು ರೇಣು ಸ್ಥಿರಚರ ಪೂರ್ಣ ।ನಿನ । ಗೆಣೆಯಾರು ಸುಗುಣ ವರೇಣ್ಯ ॥ ಅನುದಿನವು ಮನ್ಮನವು ತವ ಪಾ । ವನ ಚರಣಗಳ । ನೆನೆಯುವಂದದಿ । ವನಧಿ ಶಯನನೆ ವರವ ಕರುಣಿಸು । ವಟಪುರೇಶ ರಮೇಶ ಕೃಷ್ಣನೆ । ನೋಡು ॥೭॥

ವೀರ ವೆಂಕಟೇಶಾಲಿ ಸ್ಮರಣ । ಕರಿನಿತ್ಯ ಭಜನ ॥
ಧರಿ ದೇವ ದೇವ ಚರಣ । ಭಾರಿಹರುಷ ಪಾವ್ನು ಭಕ್ತಿನ ॥
ಎಂದು ದೇವರ ದಶಾವತಾರದ ವರ್ಣನೆ ಮಾಡುತ್ತಾ
ಭಕ್ತಿ ಯುಕ್ತ ಭಾವನೇನ । ನಿತ್ಯ ಕೊರ್ಚೆ ನಾಮಸ್ಮರಣ ॥
ಎಂದು ಭಕ್ತಿ ಪುರಸ್ಸರ ಹಾಡಿ ಸ್ತುತಿಸಿದ್ದಾರೆ.

ಪ್ರಭುಗಳು ಒಮ್ಮೆ ಅನಾರೋಗ್ಯಪೀಡಿತರಾದರು. ವಿಶೇಷ ಕಾರಣವಿಲ್ಲದೆ ಅನಿರೀಕ್ಷಿತ ಹಾಸಿಗೆ ಹಿಡಿದಾಗ ಸಹಜವಾಗಿ ಗಾಬರಿಗೊಂಡರು. ವೈದ್ಯೋಪಚಾರದ ಹೊರತಾಗಿಯೂ ಗುಣಮುಖ ರಾಗುವ ಲಕ್ಷಣ ಕಾಣಲಿಲ್ಲ. ದೇವರ ಮೇಲೆ ಭಾರಹಾಕಿ ಮುಲ್ಕಿಯ ಶ್ರೀ ವೆಂಕಟ್ರಮಣ ದೇವಸ್ಥಾನದಲ್ಲಿ ಜರಗುವ ಶ್ರೀ ದೇವರ ದರ್ಶನ ನಡೆಯಲ್ಲಿ ಪ್ರಶ್ನಿಸಿದರು. ಚಂದ್ರಹಾಸ ನಾಟಕದಲ್ಲಿ ಭಾವುಕರಾಗಿ ಬರೆದ ಮಾತೊಂದು ತಿರುವು ಮುರುವಾಗಬೇಕೆಂದು ಅಪ್ಪಣೆಯಾಯಿತು. ಮಿತ್ರ ರಾಮ ಬಾಳಿಗರು ಕೃತಿ ವಿಮರ್ಶೆಗೆ ತೊಡಗಿದರು. ದೋಷವನ್ನು ಕಂಡುಹಿಡಿದರು.

ಕಾಳಿಗುಡಿಯಲ್ಲಿ ಮದನನ ಮರಣ, ದುಷ್ಟ ಬುದ್ಧಿಯ ದುಃಖದ ಸನ್ನಿವೇಶ.

ಕೋಣ್ರ್ಸು ಕಾಮ ಗುಟ್ಟಾರಿ। ಮಾಣ್ರ್ಸು ಫೆತ್ತೆಂ ಪೊಟ್ಟಾರಿ ॥ ಪ॥
(ಗುಟ್ಟಿನಲ್ಲಿ ಕೆಲಸ ಮಾಡಿ, ಹೊಟ್ಟೆ ಮೇಲೆ ಹೊಡೆದುಕೊಂಡೆ)
ಪೂರ್ಣ ಪ್ರಾಜ್ಞು ಜಾವ್ನು ಸ್ವಾರ್ಥ । ದೋಣ್ರ್ಸು ಪಳ್ಳೊವಾಟ್ಟೇರಿ ॥ 1॥
(ತಿಳಿದೂ ತಿಳಿದೂ ಸ್ವಾರ್ಥ ಬುದ್ಧಿಯಿಂದ ದಾರಿಯಲ್ಲಿ ಬಿದ್ದೆ)
ಹೊಳ್ಳೊ ದುಃಖಾ ಪರ್ವತೇವ್ನು ಪಳ್ಳೊ ಮಿಗ್ಗೆಲೆಂ ಮಾತ್ಯಾರಿ॥
(ದೊಡ್ಡ ದುಃಖದ ಪರ್ವತ ಬಂದು ನನ್ನ ತಲೆ ಮೇಲೆ ಬಿತ್ತು)

ದುಃಖದ ಪರ್ವತವನ್ನು ನಿನ್ನ ತಲೇ ಮೇಲೆ ನೀನೇ ಬೀಳಿಸಿಕೊಂಡಿದ್ದಿ! ಅದನ್ನು ಬದಲಾಯಿಸಿ ಬರೆ ಎಂದರಂತೆ ರಾಮ್ ಬಾಳಿಗರು.

ಪ್ರಭುಗಳು ತಿದ್ದಿದರು.

ಪಳ್ಳೊ ದುಃಖಾ ಪರ್ವತೇವ್ನು । ದುಷ್ಟಬುದ್ಧೀಲೆ ಮಾತ್ಯಾರಿ ॥ 2॥
(ದುಃಖದ ಪರ್ವತ ಬಂದು ದುಷ್ಟಬುದ್ಧಿಯ ತಲೆ ಮೇಲೆ ಬಿತ್ತು)

ನಂಬಿದವರಿಗೆ ಇಂಬು. ಕಷ್ಟ ಪರಿಹಾರವಾಯ್ತು! ಪ್ರಭುಗಳು ಗುಣ ಹೊಂದಿದರು. ಅನನ್ಯ ದೈವಭಕ್ತಿಯ ದೃಷ್ಟಾಂತ!

ಇನ್ನೊಮ್ಮೆ ಪ್ರಹ್ಲಾದ ಚರಿತ್ರೆ ಬರೆಯುವಾಗಿನ ಸಂದರ್ಭ. ಕೃತಿ ಪೂರ್ತಿಯಾಗುವ ಮುನ್ನ ಮತ್ತೆ ಅನಾರೋಗ್ಯ. ಕಾಯಿಲೆ ಕಾರಣವಲ್ಲ. ಎಷ್ಟು ಪ್ರಯತ್ನಿಸಿದರೂ ಲೇಖನಿ ಸಾಗದು. ಮತಿಗೆ ಮಂಕು ಕವಿದಂತೆ. ಮತ್ತೆ ಮುಲ್ಕಿಗೆ ಪಯಣ. ದರ್ಶನದಲ್ಲಿ ಅಭಯ ಬೇಡಿಕೆ.

ದರ್ಶನದಲ್ಲಿ ಅಪ್ಪಣೆ– " ಧನಿಯನ್ನು ಮರೆತಿದ್ದಿ, ಕಾಣಿಕೆ ಹಾಕಿ ಮತ್ತೆ ಬರೆ". ನೆನಪಾಯಿತು, ಅಲ್ಲಿ ನರಸಿಂಹ ದೇವರ ವಿಶೇಷ ಸಾನ್ನಿಧ್ಯ. ಯಾವ ಕೃತಿ ರಚನೆ

ಮಾಡುವುದಿದ್ದರೂ ಮೊದಲಿಗೆ ನಂಬಿದ ದೇವರಿಗೆ ಕಾಣಿಕೆ ತೆಗೆದಿರಿಸುವುದು ಪ್ರಭುಗಳ ಪದ್ಧತಿ. ಪ್ರಹ್ಲಾದ ಚರಿತ್ರೆ ಆರಂಭಿಸುವಾಗ ಮನುಷ್ಯ ಸಹಜ ಮರೆವು ಮಾಯೆಯಾಗಿ ಕಾಡಿತು. ದರ್ಶನದ ನುಡಿಯಂತೆ ನಡೆದ ಪ್ರಭುಗಳ ಲೇಖನಿಯಿಂದ ಪ್ರಹ್ಲಾದ ಚರಿತ್ರೆ ಅದ್ಭುತವಾಗಿ ಮೂಡಿಬಂತು.

ಪ್ರಭುಗಳ ಅಮಾಯಕ ಮುಗ್ಧ ಭಕ್ತಿಗೆ ಇದೊಂದು ಅಪೂರ್ವ ನಿದರ್ಶನ.

**ಲೇಖಕರ ಕೊಂಕಣಿ ಕೃತಿ ಪರಿಚಯ:**

ಪ್ರಭುಗಳು 1912ರಲ್ಲಿ ಕನ್ನಡ ಲಿಪಿಯಲ್ಲಿ ಕೊಂಕಣಿ ಭಾಷೆಯಲ್ಲಿ ಬರೆದ ಚಂದ್ರಹಾಸ ನಾಟಕ ಕೊಂಕಣಿಯಲ್ಲಿ ಪ್ರಕಾಶನಗೊಂಡ ಮೊತ್ತಮೊದಲ ನಾಟಕ ಎಂಬ ಖ್ಯಾತಿಗೆ ಪಾತ್ರವಾಗಿದೆ . ಬಂಟ್ವಾಳ ಶ್ರೀ ವೆಂಕಟರಮಣ ಸ್ವಾಮಿ ಸೆಕೆಂಡರಿ ಶಾಲೆಯಲ್ಲಿ ಪ್ರಥಮವಾಗಿ ಅಭಿನಯಿಸಲ್ಪಟ್ಟು ಅನೇಕ ವಿದ್ವಜ್ಜನರ ಸದಭಿಪ್ರಾಯಕ್ಕೆ ಪಾತ್ರವಾಗಿದೆ. ಮುಂದೆ ಅವಿಭಜಿತ ದಕ್ಷಿಣಕನ್ನಡ ಜಿಲ್ಲೆಯಾದ್ಯಂತ ಹಾಗೂ ನೆರೆಯ ಕಾಸರಗೋಡು ಜಿಲ್ಲೆಯಲ್ಲೂ ನುರಿತ ಕಲಾವಿದರಿಂದ ಅನೇಕ ಬಾರಿ ಅಭಿನಯಿಸಲ್ಪಟ್ಟು ನಾಟಕದ ಗೀತೆಗಳು ದಕ್ಷಿಣದ ಕೊಚ್ಚಿಯಿಂದ ಉತ್ತರದ ಕಾರವಾರದವರೆಗೆ ಮನೆಮಾತಾದವು.

ಇಲ್ಲಿ ಬರುವ ಗೀತೆಗಳಲ್ಲಿ ಉತ್ತರಾದಿ ಸಂಗೀತ ಮತ್ತು ದಾಸಸಾಹಿತ್ಯದ ಪ್ರಭಾವವನ್ನು ಕಾಣಬಹುದು. ಅವರು ಬಾಲ್ಯದಲ್ಲಿ ಕಂಡ "ದತ್ತಜನ್ಮ" ಮತ್ತು "ಸಂತ ತುಕಾರಾಮ" ಮರಾಠಿ ನಾಟಕಗಳ ಗಾಢ ಪ್ರಭಾವ "ಚಂದ್ರಹಾಸ"ದ ಮೇಲೆ ಬಿದ್ದಿರಬಹುದು . 1910ರ ಸುಮಾರಿಗೆ ಮಂಗಳೂರಿನ ಮಹಮ್ಮಾಯಿ ದೇವಸ್ಥಾನದ ಬಳಿಯ ಶಾಲೆಯಲ್ಲಿ ಅಲೆಕ್ಸಾಂಡ್ರಾ ಥಿಯೇಟ್ರಿಕಲ್ಸ್‌ನವರು ಆಡುತ್ತಿದ್ದ ನಾಟಕದಲ್ಲಿನ ಚಮತ್ಕಾರಿಕ ದೃಶ್ಯವೈಭವಗಳು ಮತ್ತು ಉತ್ತರಾದಿಸಂಗೀತ ಧಾಟಿಯಲ್ಲಿದ್ದ ಹಾಡುಗಳು ಚಂದ್ರಹಾಸ ನಾಟಕ ರಚನೆಗೆ ಪ್ರೇರಣೆಯಾಯಿತೇನೋ

ಮರಾಠಿ ರಂಗಭೂಮಿಯ ಪ್ರಸಿದ್ಧ ಗಾಯಕ ಶ್ರೀ ದೀನಾನಾಥ ಮಂಗೇಶಕರ್ ರವರ ಕಂಪೆನಿ ಮಂಗಳೂರಿನಲ್ಲಿ ಎರಡು ತಿಂಗಳು ಇದ್ದು ಅಭಿನಯಿಸಿದ ನಾಲ್ಕು ಮರಾಠಿ ನಾಟಕಗಳನ್ನು ನೋಡಿ ಪ್ರಭಾವಿತರಾದರು. ಶ್ರೀ ಪ್ರಭುಗಳು 'ಏಕಚ್‌ಪ್ಯಾಲಾ' ನಾಟಕದ ಸಂಭಾಷಣೆ ಹಾಗೂ ಗೀತೆಗಳನ್ನು ಬಹಳವಾಗಿ ಮೆಚ್ಚಿಕೊಂಡಿದ್ದರಂತೆ. ಗಾಢ ಜೀವನಾನುಭವದ ಚಿಕ್ಕ ಚೊಕ್ಕ ಸಂಭಾಷಣೆ, ಭಾವಪೂರ್ಣ ಗೀತೆಗಳು ಮನಸ್ಸಿನಲ್ಲಿ ಬಹುಕಾಲ ಅಚ್ಚೊತ್ತಿ ನಿಲ್ಲುವ ವಿವಿಧ ಸನ್ನಿವೇಶಗಳು ಮತ್ತು ನವರಸಭರಿತ ಕಥಾಹಂದರವನ್ನೊಳಗೊಂಡ ಚಂದ್ರಹಾಸನಾಟಕ ರಂಗಪ್ರದರ್ಶನದಲ್ಲಿ ಇನ್ನಿಲ್ಲದ

ಯಶಸ್ಸು ಕಂಡದ್ದು ಸಹಜವೇ ಆಗಿದೆ. ಕೊಂಕಣಿ ಗೀತನಾಟಕದಲ್ಲಿ ಇದೊಂದು ಮೇರು ಕೃತಿಯಾಗಿದೆ. ಈ ಕೃತಿಯ ಪ್ರಥಮ ನಾಲ್ಕು ಆವೃತ್ತಿಗಳನ್ನು ಸ್ವತಃ ಲೇಖಕರು ತಮ್ಮ ವಿಕ್ಟೋರಿಯ ಮುದ್ರಣಾಲಯದಲ್ಲಿ ಮುದ್ರಿಸಿ ಪ್ರಕಟಿಸಿದರು. 1982ರಲ್ಲಿ ಕೃಷ್ಣ ಪ್ರಭು ಜನ್ಮಶತಾಬ್ದಿಯ ಸಂದರ್ಭ ಅವರ ಸುಪುತ್ರ ಶ್ರೀ ಲಕ್ಷ್ಮೀನಾರಾಯಣ ಪ್ರಭುಗಳು 5ನೇ ಆವೃತ್ತಿಯನ್ನು ಪುನರ್ ಮುದ್ರಿಸಿ ಹೊರತಂದಿದ್ದಾರೆ. 1998ರಲ್ಲಿ 6ನೇ ಆವೃತ್ತಿಯನ್ನು ಮೊಮ್ಮಗ ಶ್ರೀ ಪ್ರಭಾಕರ ಪ್ರಭುರವರು ಮುದ್ರಿಸಿ ಪ್ರಕಟಿಸಿರುವುದು ಈ ಕೃತಿಯ ಶ್ರೇಷ್ಠತೆಗೆ ಸಾಕ್ಷಿಯಾಗಿದೆ ಎನ್ನಲು ಸಂತೋಷವಾಗುತ್ತದೆ.

**ಪ್ರಹ್ಲಾದ ಚರಿತ್ರೆ**

ಮೊದಲ ನಾಟಕಕ್ಕೆ ದೊರೆತ ಭಾಷಾಭಿಮಾನಗಳ ಪ್ರೋತ್ಸಾಹದಿಂದ ತಾನು ಪ್ರಹ್ಲಾದ ಚರಿತ್ರೆ ನಾಟಕ ಬರೆಯಲು ಪ್ರೇರಿತನಾದೆ ಎಂದು ವಿನಮ್ರವಾಗಿ ನುಡಿಯುತ್ತಾರೆ ನಾಟಕಕಾರರು. ಭಗವಂತನ ಭಕ್ತರಲ್ಲಿ ಅಗ್ರಗಣ್ಯನಾದ ಪ್ರಹ್ಲಾದನ ಪುಣ್ಯ ಚರಿತೆಯನ್ನು ಪಂಚಮಾಂಕಗಳಾಗಿ ವಿಸ್ತರಿಸಿ ಶ್ರಾವ್ಯವಾದ ನೂತನ ಚಾಲುಗಳ ಪದ್ಯಗಳುಳ್ಳದ್ದಾಗಿ ಬಂಟ್ವಾಳ ಶ್ರೀ ವೆಂಕಟರಮಣ ಸ್ವಾಮಿ ಸೆಕೆಂಡರಿ ಶಾಲಾ ವಿದ್ಯಾರ್ಥಿಗಳಿಂದ ಪ್ರಥಮಾಭಿನೀತವಾದ ಈ ಕೃತಿ 1922 ರಲ್ಲಿ ಪ್ರಕಟವಾಯಿತು.

**ದ್ರೌಪದೀ ವಸ್ತ್ರಾಪಹರಣ**

ಕನಕದಾಸರು ವಾರ್ಧಕ ಷಟ್ಪದಿಯಲ್ಲಿ ಬರೆದ ದ್ರೌಪದಿ ವಸ್ತ್ರಹರಣ ಹಾಡುಗಳನ್ನು ಕನ್ನಡಿಗರು ಉದಯರಾಗದಲ್ಲಿ ಮನೆಮನೆಯಲ್ಲಿ ಹಾಡುವುದು ಸಂಪ್ರದಾಯ. ಈ ಕಾವ್ಯದ ಮುಖ್ಯ ವಿಷಯವನ್ನು ಕೇಂದ್ರೀಕರಿಸಿಕೊಂಡು ಕೊಂಕಣಿ ಭಾಷೆ, ಭಾವದ ಮೂಸೆಯಲ್ಲಿ ಅಚ್ಚೊತ್ತಿ ಮೂಡಿ ಬಂದ ಈ ಕೃತಿಯ ಹಾಡುಗಳು ಕೊಂಕಣಿ ಭಾಷಿಗರ ಅದರಲ್ಲೂ ಬಂಟ್ವಾಳ ಕೊಂಕಣಿಗರ ನಾಲಗೆಯಲ್ಲಿ ಉಲಿಯುತ್ತಲೇ ಇರುತ್ತವೆ. ಸಂಕ್ಷಿಪ್ತವಾದರೂ ಸಶಕ್ತವಾದ ಪದಬಂಧದಿಂದಾಗಿ ಈ ಕೃತಿಯ ಮೌಲ್ಯ ಹೆಚ್ಚಿದೆ.

ಜೋಗುಳ ಧಾಟಿಯ ಹಾಡುಗಳ ಸಂಯೋಜನೆಯ "ಶ್ರೀಕೃಷ್ಣ ಜನ್ಮಚರಿತ್ರೆ", ದಮಯಂತೀ ಕಲ್ಯಾಣದ ಪೂರ್ವಾರ್ಧ "ನಳಚರಿತ್ರೆ", ಮರಾಠಿ ಧಾಟಿಯ ಮನೋಹರವಾದ ಪದ್ಯಗಳಿಂದೊಡಗೂಡಿದ ''ಧ್ರುವ ಚರಿತ್ರೆ' ಇವರ ಇನ್ನಿತರ ಕೊಂಕಣಿ ಕೃತಿಗಳು.

## ಲೇಖಕರ ಕನ್ನಡ ಕೃತಿಗಳು

**ಡಕಾಯತಿ ಕಾದಂಬರಿ** – ಪ್ರಪಂಚದಲ್ಲಿ ಕಂಡುಬರುವ ಬಗೆಬಗೆಯ ಸಾಂಸಾರಿಕ ಪರಿಸ್ಥಿತಿಯ ಶಬ್ದ ಚಿತ್ರ, ಮನೋಹರವಾದ ಕಾದಂಬರಿ. ಮೈಸೂರು "ಕಾದಂಬರಿ ಸಂಗ್ರಹ" ಮಾಸಪತ್ರಿಕೆಯಲ್ಲಿ ಪ್ರಕಟವಾಗಿದೆ.

**ಮೃಚ್ಛಕಟಿಕ ನಾಟಕ**– ಶೂದ್ರಕ ಮಹಾಕವಿಯು ನವರಸಭರಿತವಾಗಿ ರಚಿಸಿದ ಸುನೀತಿ ಬೋಧಕ ಸಂಸ್ಕೃತ ನಾಟಕದ ತಿರುಳನ್ನು ತಿಳಿಗನ್ನಡದಲ್ಲಿ ಮನೋಹರವಾದ ಗದ್ಯ ಪದ್ಯಗಳಿಂದ ನಿರೂಪಿಸುವ ನವೀನ ನಾಟಕ, ಅನೇಕ ನಾಟಕ ಮಂಡಲಿಗಳಿಂದ ಅಭಿನೀತವಾದುದು.

**ಸುವರ್ಣ ಸಂಪುಟ**– ರಜಪೂತರ ಶೌರ್ಯೋದಾರ್ಯಗಳನ್ನು ವರ್ಣಿಸುವ ಐತಿಹಾಸಿಕ ಕಾದಂಬರಿ. ಮೈಸೂರಿನ ಭಾರತೀವಿಲಾಸ ಮಾಸಪತ್ರಿಕೆಯಲ್ಲಿ ಪ್ರಕಟವಾದುದು.

**ಕವಿ ಜಯದೇವ**– ಭಕ್ತಿವಿಜಯದ ಪುಣ್ಯಚರಿತ್ರೆ, ಬಂಟ್ವಾಳ ಎಸ್.ವಿ.ಎಸ್. ಶಾಲಾ ಅಧ್ಯಾಪಕರು, ವಿದ್ಯಾರ್ಥಿಗಳು ಮಹಾ ಸಂಭ್ರಮದಿಂದ ಅಭಿನಯಿಸಿದ ಸಂಗೀತ ನಾಟಕ 'ಕವಿ ಜಯದೇವ' ಪ್ರಭುಗಳ ಪ್ರತಿಭೆಗೆ ಅದ್ಭುತ ಸಾಕ್ಷಿ, ಭಕ್ತಿ, ಪ್ರೇಮ, ಧರ್ಮ, ದುಃಖ, ವಿನೋದ, ಮಾಯೆಗಳೆಲ್ಲವನ್ನೂ ಒಳಗೊಂಡಿರುವ ಯಶಸ್ವೀ ನಾಟಕ.

**ಪ್ರಭುಗಳ ಕಾವ್ಯದ ಪ್ರತಿಭೆಯ ಪ್ರತೀಕವಾದ ಜಯದೇವ ನಾಟಕದಲ್ಲಿ ಪದ್ಮಾವತಿ ಪೂಜಿಸುವ ಸಂದರ್ಭದ ಹಾಡು ಇಂತಿದೆ.**

ರಾಗ: ಮಧ್ಯಮಾವತಿ ಅಷ್ಟತಾಳ,

ಮಂದರ ಧರ ಮಾವರಾ। ನಂದ ಕುಮಾರ॥
ಸುಂದರ ಸುಗುಣಾಗರ। ಸುಜನೋದ್ಧಾರ॥
ಇಂದು ಮಂದಾಕಿನಿಯ ಜಲದಲಿ । ಮಿಂದು ಬಂದೆರಗುತ್ತ ಶ್ರೀಗೋ ॥
ವಿಂದ ನಿನ್ನಡಿಗಳನು ಪರಮಾ। ನಂದದಲಿ ಪೂಜಿಸುವೆ ಭಜಿಸುವೆ ॥ ॥

ಸಂಗೀತವನು ಪಾಡುತ। ತಾಂಬೂಲ ಫ।
ಲಂಗಳ ನರ್ಪಿಸುತ। ಸನ್ನುತಿಸುತ ॥

ತುಂಗ ಸುಮಧುರ । ಸೌರಭದ ಸುಮ । ನಂಗಳಿಂದಲಿ । ಸಿಂಗರಿಸಿ ಸಾ।

ಷ್ಟಾಂಗ ವಂದನೆಗೈದು ನಿನಗೀ। ಮಂಗಳಾರತಿ ಎತ್ತಿ ಬೆಳಗುವೆ ॥2॥

ದುಷ್ಟ ದುರಿತ ನಾಶನ । ಗರುಡಾಸನ ॥

ಸೃಷ್ಟಿ ಗೊಡೆಯ ಚಿದ್ಘನ। ಸ್ಥಿರ ಚರ ಪೂರ್ಣ॥

ಕಷ್ಟ ಕಲ್ಮಶ ಶಮನ ಸಜ್ಜನ। ಶಿಷ್ಟಶರಣಾಗತನ ತನುಮನ।

ದಿಷ್ಟವನು ಪಾಲಿಸು ಪರಾತ್ಪರ । ಶ್ರೇಷ್ಠವಟಪುರ ವೆಂಕಟೇಶ್ವರ ॥3॥

**ಪದ್ಮಾವತಿಯೊಂದಿಗೆ ಸೇವಕನ ಬಿನ್ನಹ –**

ಶುಕವಾಣಿ ಸರ್ವಗುಣ ಶ್ರೇಣಿ ।ಸರೋರುಹ ಪಾಣಿ। ಫಣಿವೇಣಿ॥

ಕೇಳ್ ಬಿನ್ನಹವನು ಮಹಾರಾಣಿ ॥ಪಲ್ಲ॥

ಶುಭವಾರ್ತೆಯನೊಂದನು ।ಪೇಳಲು ಬಂದೆನು ಮಾತೆ ॥ ವಿಖ್ಯಾತೆ ॥

ನುಡಿ ಲಾಲಿಸಿ ಕೇಳ್ ವರದಾತೆ ॥ ಶುಕವಾಣಿ ॥1॥

ಶ್ರೀ ಸಂತ ಶಿಖಾಮಣಿ ಸಂತಸದಿಂದಲಿ ನಾಳೆ /ಗುಣಲೋಲೆ॥

ಬರುವಂತಿಹ ಸೂಚನೆ ಕೇಳೆ ॥ ಶುಕವಾಣಿ ॥2॥

**ಸಣ್ಣವರ ಸುಬೋಧ ಶತಕ**

24 ನೀತಿಗಳನ್ನೊಳಗೊಂಡ 108 ದ್ವಿಪದಿ ಪದ್ಯಗಳುಳ್ಳ ಈ ಪುಸ್ತಕವು ಬಾಲಕ ಬಾಲಿಕೆಯರಿಗೆ ಸುಲಭವೂ, ಸರಳವೂ ಆದ ಶೈಲಿಯಲ್ಲಿ ಸದ್ಬೋಧ ಸನ್ಮಾರ್ಗ ಶಿಕ್ಷಣವನ್ನು ಕೊಡಲು ಉಪಯುಕ್ತವಾದ ಸುಜ್ಞಾನ ಕೋಶದಂತಿದೆ. ಮದ್ರಾಸ್ ಸರಕಾರದ ಟೆಕ್ಸ್ಟ್‌ಬುಕ್ ಕಮಿಟಿಯವರಿಂದ ಮತ್ತು ಡೈರೆಕ್ಟರ್ ರವರಿಂದ ಪಾಠಶಾಲಾ ಪಠ್ಯ ಪುಸ್ತಕವಾಗಿ ಮಂಜೂರಾಗಿದೆ. ಪ್ರತಿಯೊಂದು ಮನೆಯಲ್ಲಿ ಮತ್ತು ಶಾಲೆಯಲ್ಲಿ ಮಕ್ಕಳಿಗೆ ದೈನಿಕ ಪಠನಕ್ಕಾಗಿ ಈ ಪುಸ್ತಕವನ್ನು ಇಡುವುದು ಅವಶ್ಯವೆಂದು ರಾಷ್ಟ್ರಕವಿ ಗೋವಿಂದ ಪೈ, ವಿದ್ವಾನ್ ಮುಳಿಯ ತಿಮ್ಮಪ್ಪಯ್ಯ ಮೊದಲಾದವರು ಕೊಂಡಾಡಿದ್ದಾರೆ.

**ಉಜ್ವಲ ದೇಶಾಭಿಮಾನಿ ಕೃಷ್ಣಪ್ರಭುಗಳು**

ಈ

ಚಿಕ್ಕ ಕೈ ಪಿಡಿಯು

ಮುಂದಿನ

ಭರತ ಭೂಮಿಯ ಗೌರವ ಸ್ತಂಭಗಳಂತಿರುವ

ಇಂದಿನ
ಬಾಲಿಕೆಯರ ಮತ್ತು ಬಾಲಕರ
ಕೋಮಲ ಕರಕಮಲಗಳಲ್ಲಿ
ಅಲ್ಪಜ್ಞನಾದ ಗ್ರಂಥಕರ್ತನಿಂದ
ಪ್ರೇಮ ಪುರಸ್ಸರವಾಗಿ
ಸಮರ್ಪಿಸಲ್ಪಟ್ಟಿತು.

ಎಂದು ಬರೆದಿರುವುದು ಅವರ ಉದಾತ್ತ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ.

**ಸುಬೋಧ ಶತಕದಿಂದ ಆಯ್ದ ದ್ವಿಪದಿಗಳು**

**ಸತ್ಯ**

ಸುಳ್ಳಾಡಿ ಪಡೆದಿರುವ ಮರ್ಯಾದೆ ಬೆಡಗು।
ಕಲ್ಲನ್ನು ಕೊರೆದು ಮಾಡಿದ ಹಾಯಿ ಹಡಗು ॥
ಸತ್ಯವನು ನಡತೆ ನುಡಿಗಳಲಿ ಪಿಡಿದವನು।
ಸತ್ಯ ಸ್ವರೂಪ ದೇವನಿಗೆ ಪ್ರಿಯನಹನು॥
ಸತ್ಯಕ್ಕೆ ಸಾವಿಲ್ಲ, ಸತ್ಯವೇ ವೇದ।
ಸತ್ಯವಂತನೆ ಬಲ್ಲ, ಸತ್ಯದಾಮೋದ॥

**ಸ್ನೇಹ**

ಕೃಪಣನೊಳು ಸ್ನೇಹವನು ಬಳಸದಿರು ವ್ಯರ್ಥ।
ವಿಪುಲ ಸುಖದುಃಖದೊಳು ಬಿಡನವನು ಸ್ವಾರ್ಥ॥

ದುಷ್ಟನೊಳು ಸ್ನೇಹವನು ಮಾಡಲದರಿಂದ।
ಶಿಷ್ಟನಿಗು ತಪ್ಪದೈ ಕಷ್ಟ ನಿರ್ಬಂಧ॥

ಅತ್ಯಧಿಕ ಮಿತ್ರನೊಳುಮಾಡದಿರು ಸಾಲ।
ಅರ್ಥ ಸಂಬಂಧವದು ಸ್ನೇಹಕ್ಕೆ ಶೂಲ॥

**ಸದುಪದೇಶ**

ಅನ್ಯರಿಂಗುಪದೇಶಗೊಡುವ ಬಗೆಯನ್ನು।
ನಿನ್ನ ನಡತೆಯೊಳಿರಿಸಿ ತೋರಿಸೈ ನೀನು॥
ಆಡಿ ಬೋಧಿಸುವ ನುಡಿಗಿಂತ ಮೈದೋರಿ।

ಮಾಡಿ ತೋರಿಸುವುದು ಶೀಘ್ರ ಫಲಕಾರಿ॥
ಸರ್ವದಾ ಧರ್ಮಮಾರ್ಗದಿ ನಡೆಯುವವನು।
ಸರ್ವತ್ರ ಸನ್ಮಾನ್ಯ ಶ್ರೇಷ್ಠ ಪಂಡಿತನು॥

ನುಡಿನಮನ

ಮರುಗುತಿಹ ದೀನರನು ಕಾಣಲಾ ಕಡೆಗೆ।
ಸುರಿವಶ್ರುಜಲವಲಂಕಾರ ಕಣ್ಗಳಿಗೆ॥
ಬಾಯ್ಗಲಂಕಾರ ಮೃದು ಮಧುರ ಸದ್ವಚನ।
ಕೈಗಳಿಗಲಂಕಾರ ಸತ್ಪಾತ್ರದಾನ।
ಕಿವಿಗಳಿಗಲಂಕಾರ ಸದ್ಬೋಧ ಶ್ರವಣ।
ಸುವಿಚಾರವೇ ಶಿರಸ್ಸಿಗೆ ಶುಭಾಭರಣ॥
ದೇಹಕ್ಕಲಂಕಾರ ಸಾಧ್ಯವೆನಿಪಲ್ಲಿ।
ಸಾಹಸವ ಮಾಳ್ಪುದು ಪರೋಪಕಾರದಲಿ॥
ವಿಧು ಸೂರ್ಯ ಮೇಘ ನದ ನದಿ ವೃಕ್ಷ ಗೋವು।
ಮೊದಲಾದವುಗಳು ಪರಹಿತಕೆ ಜನಿಸಿದವು॥
ಪರರ ಸದ್ಗುಣದ ಗಾನವನೆಸಗಿದವನು।
ಚಿರಕಾಲ ಗುಣಶಾಲಿಯಾಗಿ ಸುಖಿಸುವನು॥

ಸುಬೋಧ ಶತಕದಲ್ಲಿ ತಾವೇ ರಚಿಸಿದ ಕೃತಿಯ ಮೇಲಿನ ಪ್ರತಿಯೊಂದು ಸೂಕ್ತಿಯನ್ನು ತನಗನ್ವಯಿಸಿಕೊಂಡು ಬಾಳಿ ಬೆಳಗಿದ ಧೀಮಂತ ಬೋಳಂತೂರು ಕೃಷ್ಣ ಪ್ರಭುಗಳು ಕೊಂಕಣಿ ರಂಗಭೂಮಿಯಲ್ಲಿ ಪ್ರಾತಃಸ್ಮರಣೀಯರು. 1965 ರಲ್ಲಿ ಇಹಲೋಕ ತ್ಯಜಿಸಿದರು. ಆ ದಿವ್ಯ ಚೇತನಕ್ಕೆ ನೂರು ನಮನಗಳು.

ಬೋಳಂತೂರು ಕೃಷ್ಣ ಪ್ರಭುಗಳು ಕೊಂಕಣಿ ಭಾಷೆಯ ಪ್ರಪ್ರಥಮ ಪ್ರಕಟಿತ ನಾಟಕ "ಚಂದ್ರಹಾಸ (1912)" ಪುಸ್ತಕವನ್ನು ಮುದ್ರಿಸಿದ ಶ್ಯಾಂಡ್ಲರ್ ಅಂಡ್ ಪ್ರೈಸ್ ಮುದ್ರಣ ಯಂತ್ರ. ವಿಶ್ವ ಕೊಂಕಣಿ ಕೇಂದ್ರದ ವಸ್ತು ಸಂಗ್ರಹಾಲಯದಲ್ಲಿ ಕಾಪಿಡಲಾಗಿದೆ.




ಕೊಂಕಣಿ ಭಾಸ ಆನಿ ಸಂಸ್ಕೃತಿ ಪ್ರತಿಷ್ಠಾನ
ವಿಶ್ವ ಕೊಂಕಣಿ ಕೇಂದ್ರ, ಕೊಂಕಣಿ ಗಾಂವ್, ಶಕ್ತಿ ನಗರ
ಮಂಗಳೂರು